# ಆಷಾಢಮಾಸ

**ಆಷಾಡಮಾಸ ಬಂದೀತವ್ವ** **ರಾಗ: ಮೋಹನ**

ಆಷಾಡಮಾಸ ಬಂದೀತವ್ವ। ಖಾಸಾ ಅಣ್ಣ ಬರಲಿಲ್ಲ।। ಎಷ್ಟೂ ನೋಡಲಿ ಅಣ್ಣಾನ ದಾರಿ। ಅದೆಷ್ಟೂ ನೋಡಲಿ ಅಣ್ಣಾನ ದಾರಿ।। ಸುವ್ವನಾರಿ ಸುವ್ವಾರಿ। ಸುವ್ವನಾರಿ ಸುವ್ವಾರಿ।।ಪ।। ಹಿಟ್ಟು ಬುತ್ತಿ ಕಟ್ಟಿ ಕೊಂಡು। ಎತ್ತಿನ ಬಂಡಿ ಹೂಡಿಕೊಂಡು। ಅಣ್ಣಾ ಕರೆಯೋಕ ಬಂದಾನುನಾರಿ। ಸುವ್ವನಾರಿ ಸುವ್ವಾರಿ।।1।। ಹೊತ್ತು ಮುಳುಗೋ ವ್ಯಾಳೀ ಒಳಗ। ದೀಪಾ ಹಚ್ಚೋ ಮನೀ ಒಳಗ। ಅಣ್ಣಾ ಕರೆಯೋಕೆ ಬಂದಾನು ನಾರಿ। ಸುವ್ವನಾರಿ ಸುವ್ವಾರಿ।।2।। ತಾಯಿ ಬಂದು ನೀರಾ ನೀಡೆ। ತಾಯಾ ಮೋರೆ ಕಂಡೆ ನಾನು। ಹಸಿದ ಹೊಟ್ಟೆ ಉಂಡ್ಹಂಗಾಯ್ತು। ಸುವ್ವನಾರಿ ಸುವ್ವಾರಿ।।3।।



## 21. "ಶ್ರೀ ವಾಮನ" ಮಾಸನಿಯಾಮಕ

ದೇವೇಶ್ವರಾಯ ದೇವಾಯ ದೇವ ಸಂಭೂತಿ ಕಾರಿಣೇ।
ಪ್ರಭವೇ ಸರ್ವ ಸರ್ವ ದೇವಾನಾಂ ವಾಮನಾಯ ನಮೋ ನಮಃ।।

ವಾಮನ ವಾಮನ ಭಾಮನ ವಂದೇ। ಸಾಮನ ಸೀಮನಾ ಶಾಮನ ಸಾನೋ।।

ವಾಮನ ವಾಮನ ಎಂದರೆ ಬಲಿಚಕ್ರವರ್ತಿ ಯಜ್ಞಶಾಲೆಗೆ ಹೋಗಿ ಮೂರು ಪಾದದ ಭೂಮಿಯನ್ನು ಬೇಡಲು ಹಾಗೇ ಆಗಲೆಂದು ಧಾರೆ ಎರೆದು ಕೊಡಲು ಒಂದು ಪಾದ ಭೂಮಿಯೆಲ್ಲಾ ತುಂಬಿಹೋಯಿತು। ಇನ್ನೊಂದು ಪಾದವು ರಸಾತಳಕ್ಕೆ ಹೋಯಿತು। ಇನ್ನೊಂದು ಪಾದ ಆಕಾಶಕ್ಕಿಡಲು ಆಕಾಶದಲ್ಲಿ ನಾರಾಯಣನ ಪಾದಕ್ಕೆ ಸೋಕಿ ಬ್ರಹ್ಮಾಂಡ ಕವಲೊಡೆದು ದೇವಗಂಗೆ ಉದ್ಭವಿಸಲು ಗಂಗೆಯನ್ನು ಪಡೆದದ್ದರಿಂದ। ವಾಮನ ಎನಿಸಿಕೊಂಡ ।।ಕೇಶವಾಯನಮಃ।।

ವಾಮನ ನಮ್ಮನ್ನು ಒಲಿದು ಕಾಯುವನಂತೆ ರಾಮ ರಾಮ।।
ವಾಮನನ ದಯದಿ ಭೂವೈಕುಂತವ ಕಂಡೆ ರಾಮ ರಾಮ ।। ಕಾಶಿಯ ಹಾದಿಯಲಿ।।

ವಾಮನ ರೂಪಿಲಿ ಬಂದು ।ಬಲಿಯ ದಾನವ ಬೇಡಲು।
ಧಾರುಣಿ ಎಲ್ಲವ ನೆಗೆಹಿದ್ಯೋ ನೀನಂದು ।।ಅಚ್ಯುತಾನಂತ।।

ಕಾಮಜನಕ ನಿನ್ನ ನಾಮ ಪ್ರೇಮದಿಂದ ಪಾಡುವಂಥ।
ನೇಮವೆನಗೆ ಪಾಲಿಸಯ್ಯ ಸ್ವಾಮಿ ವಾಮನಾ ।।ಈಶ ನಿನ್ನ।।

ಛಲಯಸಿ ವಿಕ್ರಮಣೇ ಬಲಿಮದ್ಭುತ ವಾಮನ। ಪದನಖ ನೀರಜನಿತ ಜನ ಪಾವನ।
ಕೇಶವಧೃತ ವಾಮನ ರೂಪ। ಜಯ ಜಗದೀಶ ಹರೇ।।

ವಾಮನಂ ವಿಶ್ವರೂಪಂ ಚ। ವಾಸುದೇವಂ ಚ ವಿಠ್ಠಲಂ। ವಿಶ್ವೇಶ್ವರಂ ವಿಭುಂ ವ್ಯಾಸಂ।
ತಂ ವಂದೇ ವೇದ ವಲ್ಲಭಂ।। ಓಂ ನಮೋ ಭಗವತೇ।।

ಸಾಮವನೋದುತ ದಾನವ ಬೇಡುವ। ನಾಮದ ಮಹಿಮೆಯ ಪೊಗಳುತ।
ನಾಮದ ಮಹಿಮೆಯ ಪೊಗಳುತ ಶ್ರೀಕೃಷ್ಣ। ವಾಮನ ನಮ್ಮ ಮನೆದೈವ ।।ರಂಗಬಾರೋ।।

### ಹೇಮಾದ್ರಿ ಶಿಖರಾಕಾರಂ ಶುದ್ಧ (ಪ್ರಾತಃಕಾಲದಲ್ಲಿ ಪಠಿಸತಕ್ಕ ಧದಿ ವಾಮನ ಸ್ತೋತ್ರ)

ಹೇಮಾದ್ರಿ ಶಿಖರಾಕಾರಂ ಶುದ್ಧ ಸ್ಫಟಿಕ ಸನ್ನಿಭಂ। ಪೂರ್ಣಚಂದ್ರನಿಭಂ ದೇವಂ ದ್ವಿಭುಜಂ ವಾಮನಂ ಸ್ಮರೇತ್।।1।। ಪದ್ಮಾಸನಸ್ಥಂ ದೇವೇಶಂ ಚಂದ್ರಮಂಡಲ ಮಧ್ಯಗಂ। ಜ್ವಲತ್ಕಾಲಾನಲ ಪ್ರಖ್ಯಂ ತಟಿತ್ಕೋಟಿ ಸಮಪ್ರಭಂ।।2।। ಸೂರ್ಯಕೋಟಿ ಪ್ರತೀಕಾಶಂ ಚಂದ್ರಕೋಟಿ ಸುಶೀತಲಂ। ಚಂದ್ರಮಂಡಲ ಮಧ್ಯಸ್ಥಂ ವಿಷ್ಣು ಮನ್ಯಯಮಚ್ಯುತಂ।।3।। ಶ್ರೀವತ್ಸಕೌಸ್ತುಭೋರಸ್ಕಂ ದಿವ್ಯರತ್ನ ವಿಭೂಷಿತಂ। ಪೀತಾಂಬರ ಮುಂದಾರಾಂಗಂ ವನಮಾಲಾ ಸುಶೋಭಿತಂ।।4।। ಸುಂದರಂ ಪುಂಡರೀಕಾಕ್ಷಂ ಕಿರೀಟೇನ ವಿರಾಜಿತಂ। ಷೋಡಶಸ್ತ್ರೀಯುತಂ ಸಮ್ಯಕ್ ಅಪ್ಸರೋಗಣ ಸೇವಿತಂ।।5।। ಋಗ್ಯಜುಸ್ಸಾಮಾಧರ್ವಾದ್ಯೈಃ ಗೀಯಮಾನಂಜನಾ ರ್ದನಂ। ಚತುರ್ಮುಖಾದಿ ದೇವೇಶೈಃ ಸ್ತೋತ್ರಾರಾಧ ತತ್ಪರೈಃ।।6।। ಸನಕಾದ್ಯೈರ್ಮುನಿಗರ್ಣೈಃ ಸ್ತೂಯಮಾನಮಹರ್ನಿಶಂ। ತ್ರಿಯಂಬಕೋ ಮಹಾದೇವೋ ನೃತ್ಯತೆಯಸ್ಯ ಸನ್ನಿಧೌ।।7।। ದಧಿ ಮಿಶ್ರಾನ್ನಕಬಲಂ ಋಕ್ಮಪಾತ್ರಂಚ ದಕ್ಷಿಣೆ। ಕರೇತು ಚಿಂತಯೇ ದ್ವಾಮೇಪಿಯೂಷಮಮಲಂ ಸುಧೀಃ।।8।। ಸಾಧಕಾನಾಂ ಪ್ರಯಚ್ಛಂತ ಮನ್ನಪಾನ ಮನುತ್ತಮಂ। ಬ್ರಾಹ್ಮೆ ಮುಹೂರ್ತೇ ಚೋಥ್ಥಾಯ ಧ್ಯಾಯೇದ್ದೇವ ಮಧೋಕ್ಷಜಂ।।9।। ಅತಿಸುವಿಮಲ ಗಾತ್ರಂ ಋಕ್ಮ ಪಾತ್ರಸ್ಥಮನ್ನಂ। ಸುಲಲಿತದಧಿಖಂಡಂ ಪಾಣಿನಾ ದಕ್ಷಿಣೇನ।।10।। ಕಲಮಶ ಮೃತಪೂರ್ಣಂ ವಾಮಹಸ್ತೇ ದದಾನಂ। ತರತಿ ಸಕಲ ದುಃಖಾತ್ ವಾಮನಂ ಭಾವಯೇದ್ಯಃ।।11।। ಕ್ಷೀರಮನ್ನ ಮನ್ನದಾ ತಾಲ ಭೇದನ್ನಾದಯೇವಚ। ಪುರಸ್ತಾದನ್ನಮಾಪ್ನೋತಿ ಪುನರಾವರ್ತಿವರ್ಜಿತಂ।।12।। ಆಯುರಾರೋಗ್ಯಮೈಶ್ವರ್ಯಂ ಲಭತೇಚಾನ್ನ ಸಂಪದಃ। ಇದಂ ಸ್ತೋತ್ರ ಪಠೇದ್ಯಸ್ತು ಪ್ರಾತಃಕಾಲೇದ್ವಿಜೋತ್ತಮಃ।।13।। ಅಕ್ಲೇಶಾದನ್ನಸಿಧ್ಯರ್ಥಂ ಜ್ಞಾನಸಿಧ್ಯರ್ಥ ಮೇವಚ।। ಅಭ್ರ ಶ್ಯಾಮಃಶುಭ್ರ ಯಜ್ಞೋಪವೀತಿ। ಸತ್ಕೌಪೀನಃ ಪೀತಕೃಷ್ಣಾಜಿನಶ್ರೀಃ।।14।। ಛತ್ರೀ ದಂಡೀ ಪುಂಡರೀ ಕಾಯತಾಕ್ಷಃ। ಪಾಯಾದ್ದೇವೋ ವಾಮನೋಬ್ರಹ್ಮಚಾರೀ।।15।। ಅಜಿನದಂಡಕ ಮಂಡಲುಮೇಖಲಾ ರುಚಿರ ಪಾವನ ವಾಮನ ಮೂರ್ತಯೇ। ಮಿತಜಗತ್ತ್ರಿತಯಾಯ ಜಿತಾರಯೆ ನಿಗಮವಾಕ್ಪಟವೆ ವಟವೆ ನಮಃ।।16।। ಶ್ರೀಭೂಮಿಸಹಿತಂ ದಿವ್ಯಂ ಮುಕ್ತಾಮಣಿ ವಿಭೂಷಿತಂ। ನಮಾಮಿ ವಾಮನಂ ವಿಷ್ಣುಂ ಭುಕ್ತಿ ಮುಕ್ತಿಪ್ರದಾಯಕಂ।।17।। ವಾಮನೋ ಬುದ್ಧಿ ದಾತಾಚ ದ್ರವಸ್ಥೋ ವಾಮನಸ್ಮ ೃತಃ। ವಾಮನಾಸ್ತಾರಕೋಭಾಭ್ಯಾಂ ವಾಮನಾಯ ನಮೋ ನಮಃ।।18।।

### ಬಲಿಯ ಮನೆಗೆ ವಾಮನ

ಬಲಿಯ ಮನೆಗೆ ವಾಮನ ಬಂದಂತೆ। ಭಗೀರಥಗೆ ಶ್ರೀ ಗಂಗೆ ಬಂದಂತೆ। ಮುಚುಕುಂದಗೆ ಶ್ರೀ ಮುಕುಂದ ಬಂದಂತೆ। ಗೋಪಿಯರಿಗೆ ಗೋವಿಂದ ಬಂದಂತೆ। ವಿದುರನ ಮನೆಗೆ ಶ್ರೀಕೃಷ್ಣ ಬಂದಂತೆ। ವಿಭೀಷಣನ ಮನೆಗೆ ಶ್ರೀರಾಮ ಬಂದಂತೆ। ನಿನ್ನ ನಾಮವು ಬಂದು ಎನ್ನ ನಾಲಿಗೆಯಲಿ ನಿಂದು ಸಲಹಲಿ ಶ್ರೀಪುರಂದರವಿಠಲ।।

### ವಾಮನನು ತ್ರಿಪಾದ ಬಲಿಯ ಭೂಮಿಯ ಬೇಡಿ

ವಾಮನನು ತ್ರಿಪಾದ ಬಲಿಯ ಭೂಮಿಯ ಬೇಡಿ। ಆ ಮಹಾ ಬ್ರಹ್ಮಾಂಡ ವಾಮನನಖದಿಂ ದೊಡೆದು। ವ್ಯೋಮಗಂಗೆಯು ಬರಲು ಸೋಮಶೇಖರ ಜನಕ ಆ ಕಮಂಡಲಮೀರಿ ಭೂಮಿಯೊಳು ಬರಲಾಗ। ರೋಮದಲಿತ್ರಿಕೋಟಿ ರೂಪವನು ಪುಟ್ಟಿಸಿದ। ಗುರುತಂದೆ ಗೋಪಾಲವಿಠಲ ನಿನ್ನ ಧ್ಯಾನವನು ಕೊಟ್ಟು ಸಲಹೋ।।



## 22. ಗುರುಪೂರ್ಣಿಮಾ

### ಧ್ಯಾನ ಮೂಲಂ ಗುರೋಃ ಮೂರ್ತಿಃ

ಧ್ಯಾನ ಮೂಲಂ ಗುರೋಃ ಮೂರ್ತಿಃ। ಪೂಜಾ ಮೂಲಂ ಗುರೋಃ ಪದಂ। ಮಂತ್ರ ಮೂಲಂ ಗುರೋಃ ವಾಕ್ಯಂ।

ಮೋಕ್ಷಮೂಲಂ ಗುರೋಃ ಕೃಪಾ।। ಗುಕಾರಃಶ್ಚಂಧ ಕಾರಸ್ತು। ರುಕಾರಸ್ತನ್ನಿರೋಧಕೃತ್। ಅಂಧಕಾರ ವಿನಾಶಿತ್ವಾತ್। ಗುರುರುತ್ಯ ಭಿದೀಯತೇ।। ಅಖಂಡಮಂಡಲಾಕರಂ ವ್ಯಾಪ್ತಂ ಯೇನ ಚರಾಚರಂ। ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀಗುರವೇ ನಮಃ।। ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ। ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರುವೇ ನಮಃ।। ಗುರುರ್ಬ್ರಹ್ಮಾ ಗುರುರ್ವಿಷ್ಣು ಗುರುರ್ದೇವೋ ಮಹೇಶ್ವರಃ। ಗುರುದೇವ ಪರಂಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ।। ಸ್ಥಾವರಂ ಜಂಗಮಂ ವ್ಯಾಪ್ತಂ ಯತ್ಕಿಂಚಿತ್ ಸಚರಾಚರಂ। ತತ್‌ಪದಂ ದರ್ಶಿತಂ ಯೇನ ತಸ್ಮೈ ಶ್ರೀಗುರವೇ ನಮಃ।। ಚಿನ್ಮಯಂ ವ್ಯಾಪಿ ಯತ್ಸರ್ವಂ ತ್ರೈಲೋಕ್ಯಂ ಸಚರಾಚರಂ। ತತ್‌ಪದಂ ದರ್ಶಿತಂ ಯೇನ ತಸ್ಮೈ ಶ್ರೀಗುರವೇ ನಮಃ।। ಸರ್ವಶ್ರುತಿ ಶಿರೋರತ್ನ ವಿರಾಜಿತ ಪಾದಾಂಬುಜಃ। ವೇದಾಂತಾಂಬುಜಸೂರ್ಯೋ ಯಸ್ತಸ್ಮೈ ಶ್ರೀಗುರುವೇ ನಮಃ।। ಚೈತನ್ಯಃ ಶಾಶ್ವತಃ ಶಾಂತೋ ವ್ಯೋಮಾತೀತೋ ನಿರಂಜನಃ। ಬಿಂದುನಾದಕಲಾತೀತಃ ತಸ್ಮೈ ಶ್ರೀಗುರವೇ ನಮಃ।। ಜ್ಞಾನಶಕ್ತಿ ಸಮಾನಾರೂಢಃ ತತ್ತ್ವ ಮಾಲಾವಿಭೂಷಿತಃ। ಭುಕ್ತಿಮುಕ್ತಿ ಪ್ರದಾತಾ ಚ ತಸ್ಮೈ ಶ್ರೀಗುರವೇ ನಮಃ।। ಅನೇಕಜನ್ಮ ಸಂಪ್ರಾಪ್ತ ಕರ್ಮಬಂಧವಿದಾಹಿನೇ। ಆತಜ್ಞಾನಪ್ರದಾನೇನ ತಸ್ಮೈ ಶ್ರೀಗುರವೇ ನಮಃ।। ಶೋಷಣಂ ಭವಸಿಂಧೋಶ್ಚಜ್ಞಾಪನಂ ಸಾರಸಂಪದಃ। ಗುರೋಃ ಪಾದೋದಕಂ ಸಮ್ಯಕ್ ತಸ್ಮೈ ಶ್ರೀಗುರುವೇ ನಮಃ।। ನಗುರೋರಧಿಕಂ ತತ್ತ್ವಂ ನ ಗುರೋರಧಿಕಂ ತಪಃ। ತತ್ತ್ವಜ್ಞಾನಾತ್ ಪರಂ ನಾಸ್ತಿ ತಸ್ಮೈ ಶ್ರೀಗುರವೇ ನಮಃ।। ಮನ್ನಾಥಃ ಶ್ರೀಜಗನ್ನಾಥಃ ಮದ್ಗುರುಃ ಶ್ರೀಜಗದ್ಗುರುಃ। ಮದಾತ್ಮಾ ಸರ್ವಭೂತಾತ್ಮಾ ತಸ್ಮೈ ಶ್ರೀಗುರವೇ ನಮಃ।। ಗುರುರಾದಿರನಾದಿಶ್ಚ ಗುರುಃ ಪರಮದೈವತಂ। ಗುರೋಃ ಪರತರಂ ನಾಸ್ತಿ ತಸ್ಮೈ ಶ್ರೀಗುರವೇ ನಮಃ।। ನಿತ್ಯಾನಂದಾಯ ದತ್ತಾಯ ನಿರ್ಮಲಾಯ ಚಿದಾತ್ಮನೇ। ಜ್ಞಾನೋತ್ತಮಾಯ ಗುರುವೇ ತಸ್ಮೈ ಶ್ರೀ ಗುರುವೇ ನಮಃ। ಚಿದ್ರೂಪೇಣ ಪರಿವ್ಯಾಪ್ತಂ ತ್ರೈಲೋಕ್ಯಾಂ ಸ ಚರಾಚರಮ್। ತತ್ಪದಂ ದರ್ಶಿತಂ ಯೇನ ತಸ್ಮೈಶ್ರೀ ಗುರುವೇ ನಮಃ।। ಬ್ರಹ್ಮಾನಂದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಂ। ದ್ವಂದ್ವಾತೀತಂ ಗಗನ ಸದೃಶಂ ತತ್ತ್ವಮಸ್ಯಾದಿ ಲಕ್ಷ್ಯಮ್।। ಏಕಂ ನಿತ್ಯಂ ವಿಮಲಮಚಲಂ ಸರ್ವಧೀಸಾಕ್ಷಿಭೂತಂ। ಭಾವಾತೀತಂ ತ್ರಿಗುಣ ರಹಿತಂ ಸದ್ಗುರುಂ ತಂ ನಮಾಮಿ।।

## ಗುರವೇ ಸರ್ವಲೋಕಾನಾಂ

ಗುರವೇ ಸರ್ವಲೋಕಾನಾಂ ಭಿಷಜೇಭವ ರೋಗಿಣಾಮ್। ನಿಧಯೇ ಸರ್ವವಿದ್ಯಾನಾಂ ದಕ್ಷಿಣಾಮೂರ್ತಯೇ ನಮಃ।।1।। ಅಪಾದಮೌಳಿ ಪರ್ಯಂತಂ ಗುರೂಣಾಂ ಆಕೃತಿಂ ಭಜೇತ್। ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ।।2।। ಸಪ್ತಸಾಗರ ಪರ್ಯಂತಂ ತೀರ್ಥಸ್ನಾನಾಫಲಂ ಯಥಾ। ಗುರೋರಂಘ್ರಿಜಲೇ ಬಿಂದು ಸಹಸ್ರಾಂಶ ನಪೂರಯೇತ್।।3।।

## ತತಃ ಕಿಂ ತತಃ ಕಿಂ (ಗುರ್ವಾಷ್ಟಕದಿಂದ)

ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್।। ಶರೀರಂ ಸುರೂಪಂ ತಥಾ ವಾ ಕಲತ್ರಂ। ಯಶ ಶ್ಚಾರು ಚಿತ್ರಂ ಧನಂ ಮೇರುತುಲ್ಯಮ್। ಗುರೋರಂಘ್ರಿಪದ್ಮೇ ಮನಶ್ಚೇನ್ನ ಲಗ್ನಂ।।1।। ಕಲತ್ರಂ ಧನಂ ಪುತ್ರ ಪೌತ್ರಾದಿ ಸರ್ವಂ। ಗೃಹಂ ಬಾಧವಾಃ ಸರ್ವಮೇತದ್ದಿಜಾಲಂ। ಗುರೋರಂಘ್ರಿ ಪದ್ಮೇ। ಮನಶ್ಚೇನ ಲಗ್ನಂ।।2।। ಷಡಂಗಾ ದಿವೇದೋ ಮುಖೇ ಶಾಸ್ತ್ರವಿದ್ಯಾ ಕವಿತ್ವಾದಿಗದ್ಯಂ ಸುಪದ್ಯಂ ಕರೋತಿ। ಗುರೋರಂಘ್ರಿಪದ್ಮೇ ಮನಶ್ಚೇನ್ನ ಲಗ್ನಂ।।3।। ವಿದೇಶೇಷು ಮಾನ್ಯಃ ಸ್ವದೇಶೇಷು ಧನ್ಯಃ। ಸದಾಚಾರವೃತ್ತೇಷು ಮತ್ತೋ ನ ಚಾನ್ಯಃ। ಗುರೋರಂಘ್ರಿಪದ್ಮೇ ನಶ್ಚೇನ್ನ ಲಗ್ನಂ।।4।। ಕ್ಷಮಾ ಮಂಡಲೇ ಭೂಪ ಭೂಪಾಲವೃಂದೈಃ। ಸದಾ ಸೇವಿತಂ ಯಸ್ಯ ಪಾದಾರ ವಿಂದಂ। ಗುರೋರಂಘ್ರಿಪದ್ಮೇ ಮನಶ್ಚೇನ ಲಗ್ನಂ।।5।। ಯಶೋಮೇಗತಂ ದಿಕ್ಷುದಾನ ಪ್ರತಾಪಾ। ಜಗದ್ವಸ್ತು ಸರ್ವಂ ಕರೇಯ್ತು ಪ್ರಸಾದಾತ್। ಗುರೋರಂಘ್ರಿಪದ್ಮೇ ಮನಶ್ಚೇನ ಲಗ್ನಂ।।6।। ನ ಭೋಗೇ ನ ಯೋಗೇ ನ ವಾ ವಾಜಿರಾಜೌ। ನ ಕಾಂತಾಮುಖೇ ನೈವ ವಿತ್ತೇಷು ಚಿತ್ತಂ। ಗುರೋ ರಂಘ್ರಿಪದ್ಮೇ ಮನಶ್ಚೇನ್ನ ಲಗ್ನಂ।।7।। ಅರಣ್ಯೇ ನ ವಾ ಸ್ವಸ್ಯ ಗೇಹೇ ನ ಕಾರ್ಯೇ। ನ ದೇಹೇ ಮನೋ ವರ್ತತೇ ಮೇ ತ್ವನರ್ಘ್ಯೇ। ಗುರೋರಂಘ್ರಿಪದ್ಮೇ ಮನಶ್ಚೇನ್ನ ಲಗ್ನಂ।।8।। ಅನರ್ಘ್ಯಾಣಿ ರತ್ನಾನಿ ಭುಕ್ತಾನಿ ಸಮ್ಯಕ್। ಸಮಾಲಿಂಗಿತಾ ಕಾಮಿನೀಯಾ ಮಿನೀಷ್ಟು ಗುರೋರಂಘ್ರಿಪದ್ಮೇ ಮನಶ್ಚೇನ ಲಗ್ನಂ।।9।।

### ಅನಂತಸಂಸಾರ ಸಮುದ್ರ ತಾರ

ಅನಂತಸಂಸಾರ ಸಮುದ್ರತಾರ ನೌಕಾಯಿತಾಭ್ಯಾಂ ಗುರುಭಕ್ತಿದಾಭ್ಯಾಮ್। ವೈರಾಗ್ಯಸಾಮ್ರಾಜ್ಯದ ಪೂಜನಾಭ್ಯಾಂ ನಮೋ ನಮಃ ಶ್ರೀಗುರುಪಾದುಕಾಭ್ಯಾಮ್॥ ಕವಿತ್ವವಾರಾಶಿನಿಶಾಕರಾಭ್ಯಾಂ ದೌರ್ಭಾಗ್ಯದಾವಾಂ ಬುದಮಾಲಿಕಾಭ್ಯಾಮ್। ದೂರೀಕೃತಾನಮ್ರ ವಿಪತ್ತಿತಾಭ್ಯಾಂ ನಮೋ ನಮಃ ಶ್ರೀಗುರುಪಾದುಕಾಭ್ಯಾಮ್॥ ನತಾ ಯಯೋಃ ಶ್ರೀಪತಿತಾಂ ಸಮೀಯುಃ ಕದಾಚಿದಪ್ಯಾಶು ದರಿದ್ರವರ್ಯಾಃ। ಮೂಕಾಶ್ಚವಾಚಸ್ಪತಿತಾಂ ಹಿ ತಾಭ್ಯಾಂ ನಮೋ ನಮಃ ಶ್ರೀಗುರುಪಾದುಕಾ ಭ್ಯಾಮ್॥ ನಾಲೀಕನೀಕಾಶಪದಾಹೃತಾಭ್ಯಾಂ ನಾನಾವಿಮೋಹಾದಿ ನಿವಾರಿಕಾಭ್ಯಾಮ್। ನಮಜ್ಜನಾ ಭೀಷ್ಟತತಿಪ್ರದಾಭ್ಯಾಂ ನಮೋ ನಮಃ ಶ್ರೀಗುರುಪಾದುಕಾಭ್ಯಾಮ್॥ ನೃಪಾಲಿ ಮೌಲಿವ್ರಜರತ್ನಕಾಂತಿ ಸರಿದ್ವಿರಾಜತ್ ಝುಷಕನ್ಯಕಾಭ್ಯಾಮ್। ನೃಪತ್ವದಾಭ್ಯಾಂ ನತಲೋಕಪಂಕ್ತೇಃ ನಮೋ ನಮಃ ಶ್ರೀಗುರುಪಾದುಕಾಭ್ಯಾಮ್॥ ಪಾಪಾಂಧ ಕಾರಾರ್ಕ ಪರಂಪರಾಭ್ಯಂ ತಾಪತ್ರಯಾಹೀಂದ್ರ ಖಗೇಶ್ವರಾಭ್ಯಾಮ್। ಜಾಡ್ಯಾಬ್ದಿಸಂಶೋಷಣ ವಾಡವಾಭ್ಯಾಂ ನಮೋ ನಮಃ ಶ್ರೀಗುರುಪಾದುಕಾಭ್ಯಾಮ್॥ ಶಮಾದಿಷಟ್ಕಪ್ರದವೈಭವಾಭ್ಯಾಂ ಸಮಾಧಿದಾನವ್ರತ ದೀಕ್ಷಿತಾಭ್ಯಾಮ್। ರಮಾ ಧವಾಂಘ್ರಿಸ್ಥಿರಭಕ್ತಿದಾಭ್ಯಾಂ ನಮೋ ನಮಃ ಶ್ರೀಗುರುಪಾದುಕಾ ಭ್ಯಾಮ್॥ ಸ್ವಾರ್ಚಾಪರಾಣಾಮ್ ಅಖಿಲೇಷ್ಟದಾಭ್ಯಾಂ ಸ್ವಾಹಾಸಹಾಯಾಕ್ಷಧುರಂಧರಾಭ್ಯಾಮ್। ಸ್ವಾಂತಾಚ್ಛಭಾವಪ್ರದಪೂಜನಾಭ್ಯಾಂ ನಮೋ ನಮಃ ಶ್ರೀಗುರುಪಾದುಕಾ ಭ್ಯಾಮ್॥ ಕಾಮಾದಿಸರ್ಪವ್ರಜಗಾರುಡಾಭ್ಯಾಂ ವಿವೇಕವೈರಾಗ್ಯ ನಿಧಿಪ್ರದಾಭ್ಯಾಮ್। ಬೋಧಪ್ರದಾಭ್ಯಾಂ ದ್ರುತಮೋಕ್ಷ ದಾಭ್ಯಾಂ ನಮೋ ನಮಃ ಶ್ರೀಗುರುಪಾದುಕಾಭ್ಯಾಮ್॥

### ವೇದವ್ಯಾಸ ಗುಣಾವಾಸ

ವೇದವ್ಯಾಸ ಗುಣಾವಾಸ ವಿದ್ಯಾಧೀಶ ಸತಾಂವಶ। ಮಾಂ ನಿರಾಶಂ ಗತಕ್ಲೇಶಂ ಕುರ್ವನಾಶಂ ಹರೇನಿಶಂ॥

### ವ್ಯಾಸಂ ವಸಿಷ್ಠನ ಪ್ತಾರಂ

ವ್ಯಾಸಂ ವಸಿಷ್ಠನ ಪ್ತಾರಂ ಶಕ್ತೇಃ ಪೌತ್ರಮಕಲ್ಮಷಂ। ಪರಾಶರಾತ್ಮಜಂ ವಂದೇ ಶುಕತಾತಂ ತಪೋ ನಿಧಿಂ॥ ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯವಿಷ್ಣುವೇ। ನಮೋ ವೈ ಬ್ರಹ್ಮನಿಧಯೇ ವಾಸಿಷ್ಠಾಯ ನಮೋ ನಮಃ॥

### ಇದು ಏನು ವೇಷಾ ಶ್ರೀವೇದವ್ಯಾಸ

ಇದು ಏನು ವೇಷಾ ಶ್ರೀವೇದವ್ಯಾಸ। ಭಾನು ಕೋಟಿ ಪ್ರಕಾಶ ಬದರಿ ನಿವಾಸಾ॥ಪ॥ ಮುತ್ತು ಮಾಣಿಕ್ಯ ನವರತ್ನ ಕಿರೀಟವಿರೆ। ನೇತ್ತಿಯೊಳಗೆ ಜಡೆ ಪೊಟ್ಟುಕೊಂಡಿಪ್ಪದು॥1॥ ದ್ರೌಪದಿ ಕರೆಯಲು ದಿವ್ಯ ವಸ್ತ್ರವನಿತ್ತೆ। ಕೌಪೀನ ಧರಿಸಿಹ ಕೌತುಕತಿಳಿಯದು॥2॥ ವರವೈಕುಂಠವಬಿಟ್ಟು ಮೋಹನ ವಿಠಲಾ ಧರೊಯೆಳು ಬೋರೆಯ ಮರದಡಿಯಿರುವುದು॥3॥

### ಮಧ್ವಾಂತರ್ಗತ ವೇದವ್ಯಾಸ

ಮಧ್ವಾಂತರ್ಗತ ವೇದವ್ಯಾಸ-ಕಾಯೋ। ಶುದ್ಧ ಮೂರುತಿಯೇ ಸರ್ವೇಶಾ॥ಪ॥ ಶ್ರದ್ಧೆಯಿಂದಲಿ ನಿನ್ನ ಭಜಿಸುವ ಜನರಿಗೆ। ಬುದ್ಧ್ಯಾದಿಗಳ ಕೊಟ್ಟುದ್ಧರಿಸೋ ದೇವರ ದೇವ॥ಅ.ಪ॥ ದ್ವಾಪರದಲಿ ಒಬ್ಬ ಮುನಿಪ-ತನ್ನ-ಕೋಪ ದಿಂದಲಿ ಕೊಟ್ಟ ಶಾಪ। ಶಾಪಿಸಲು ಜ್ಞಾನಲೋಪ-ವಾಗೆ ಅಪಾರ ತತ್ತ್ವಸ್ವರೂಪ॥ ಶ್ರೀಪತಿಯೆ ಕಾಯೆಂದು ಮೊರೆಯಿಡೆ ಪಾಪವಿರಹಿತಳಾದ ಯಮುನೆಯ। ದ್ವೀಪದಲಿ ಅಂಬಿಗರ ಪೆಣ್ಣಿನ ರೂಪಗೊಲಿದವನಲ್ಲಿ ಜನಿಸಿದೆ॥1॥ ವೇದವಾದಗಳೆಲ್ಲ ಕೆಡಲು ತತ್ವ-ವಾದಿ ಜನರು ಬಾಯಿಬಿಡಲು। ಮೇದಿನಿ ಸುರರು ಮೊರೆಯಿಡಲು ನಾನಾ-ವೇದಗಳ ವಿಭಾಗಿಸಲು। ಮೋದದಿಂದ ತದರ್ಥ ಬೋಧಕವಾದ ಸೂತ್ರಪುರಾಣ ವಿರಚಿಸಿ। ವಾದಿಗಳ ನಿರ್ವಾದ ಮಾಡಿದ ಸಾಧುವಂದಿತ ಬಾದರಾಯಣ॥2॥ ಸುಮತಿಗಳಿಗೆ ನೀ ಬೋಧಿಸಿದೆ-ಮಿಕ್ಕ ಕುಮತಿಗಳನು ನೀ ಛೇದಿಸಿದೆ।

ಕ್ರಿಮಿಯಿಂದ ರಾಜ್ಯವಾಳಿಸಿದೆ ಜಗತ್ಸ್ವಾಮಿಚರ್ಯವ ನೀ ತೋರಿಸಿದೆ।। ವಿಮಲರೂಪನೆ ಕಮಲನಾಭನೆ ರಮೆಯ ಅರಸನೆ ರಮ್ಯ ಚರಿತನೆ। ಮಮತೆಯಲಿ ಕೊಡು ಕಾರ್ಮಿತಾರ್ಥವ ನಮಿಸುವೆನು ಹಯವದನಮೂರುತಿ।।3।।

## ಮಧ್ವಾಂತರ್ಗತ ವೇದವ್ಯಾಸ ಮಮಜ ರಾಗ: ಸಾವೇರಿ–ಆದಿತಾಳ

ಮಧ್ವಾಂತರ್ಗತ ವೇದವ್ಯಾಸ ಮಮಜ ಹೃದ್ವನರುಹಸನ್ನಿವಾಸ।।ಪ।। ಸದ್ವಿದ್ಯಾ ಕೊಡು ಶ್ರೀಕೃಷ್ಣದ್ವೈಪಾಯನ ಚಿದ-ಚಿದ್ವಿಲಕ್ಷಣ ತ್ವಾತ್ವದದ್ವಯಾಬ್ಜವ ತೋರೋ।।ಅ.ಪ।। ಬಾದರಾಯಣ ಬಹುರೂಪ ಸನ-ಕಾದಿಸನ್ನುತ ಧರ್ಮಯೂಪ ವೇದೋದ್ಧಾರಾದಾನಾದಿಕರ್ತ ಪೂರ್ಣ- ಬೋಧಸದ್ಗುರು ವರರಾಧಿತಪದಯುಗ।। ಮೇದಿನಿಯೊಳಾನೋರ್ವ ಪಾಮ-ರಾಮನು ಕೈಪಿಡಿ ಕರುಣಮ-ಹೋದಧೇ ಕಮನೀಯಕಾಯ ಪ್ರ-ಬೋಧಮುದ್ರಭಯ ಕರಾಂಬುಜ।।1।। ಹರಿತೋಪಲಾಭಶವೀರ-ಪರಾಶರಮುನಿ-ವರಸುಕುಮಾರ ಪರಮಪುರುಷಕಾರ್ತಸ್ವರಭರ್ಗ ಪ್ರಮುಖ ನಿ-ರ್ಜರ ಗಣಮುನಿನುತ।। ವರಪಾದಪಂಕಜ ಕುರುಕುಲದಿ ಧೃತರಾಷ್ಟ್ರಪಾಂಡುವಿ- ದುರರ ಪಡೆದೈವರಿಗೊಲಿದು ಸಂ-ಹರಿಸಿ ದುರ್ಯೋಧನನ ಭಾರತ ರಚಿಸಿದ ಸುಂದರ ಕವೀಂದ್ರ।।2।। ಜಾತರೂಪ ಜಟಾಜೂಟ-ಶ್ರೀ-ನಿಕೇತನ ತಿಲಕಲಲಾಟ-ಪೀತಕೃಷ್ಣಾಜಿನ ಶ್ವೇತಶ್ರೀಯಜ್ಞೋಪವೀತಮೇಖಲದಂಡಾ-ನ್ವಿತ್ಕಮಂಡಲ।। ಭೂತಭಾವನ ಭೂತಿಕೃತ್ಸ-ದ್ಭೂತಿ ದಾಯಕ ಶ್ರೀಜಗನ್ನಾಥವಿಠ್ಠಲ ನಾತುತಿಸಬಲ್ಲೆನೆ ನಿನ್ನ ಮಹಿಮೆಯ ಸು-ಖಾತ್ಮ ಪಾತಕನು ಅಲ್ಪಾತುಮನು ನಾ।।3।।

## ವ್ಯಾಸ ಬದರಿವಾಸ

ವ್ಯಾಸ ಬದರಿವಾಸ। ಎನ್ನಯ ಕ್ಲೇಶ। ನಾಶನಗೈಸುಮೌನೀಶ।।ಪ।। ಸಾಸಿರಮಹಿಮನ ದೋಷರಹಿತ ಸುರಭೂಸುರ ಪರಿಪಾಲ ಶಾಶ್ವತವೇದ।।ಅ.ಪ।। ಸತ್ಯವತಿ ವರಸೂನು ಭವತಿದುರಭಾನು। ಭೃತ್ಯವರ್ಗದ ಸುರದೇನು।। ಸತ್ಯಮೂರುತಿಯ ನೀನು ಸ್ತುತಿಪೆನಾನು। ನಿತ್ಯನಿನ್ನಂಘ್ರಿಯ ರೇಣು।। ಉತ್ತಮಾಂಗದಲಿ ಹೊತ್ತು ಹೊತ್ತಿಗೆ ಸೂಸುತ್ತಿರತಿಗದು ಅತ್ಯಂತ ಸುಖಕರ।। ಸುತ್ತುವ ಸುಳಿಯೆಂದೆತ್ತಿ ಕಡೆಗೆಯಿಡು। ಎತ್ತಡನೊಡಲು ವ್ಯಾಪುತ ಸದಾಗಮ।।1।। ಲೋಕವಿಲಕ್ಷಣಋಷಿ। ಗುಣವಾರಿರಾಸಿ। ವೈಕುಂಠ ನಗರನಿವಾಸಿ। ನಾಕಾರಿಗಳಕುಲದ್ವೇಷಿ ಚಿತ್ರ ಸನ್ಯಾಸಿ। ಬೇಕೆಂದು ಭಜಿಪೆನಿಲಿಸಿ। ಶೋಕಮಾಡುವದು ಅನೇಕ ಪರಿಯಿಂದ। ಆ ಕುರುವಂಶದ ನಿಕರ ತರಿಸಿದೆ।। ಭೂಕಾಂತರು ನೋಡೆ ಸಾಕಾರದೇವ। ಕೃಪಾಕರ ಮುನಿದಿವಾಕರಭಾಸ।।2।। ಸ್ಮರಿಸಿದವರ ಮನೋಭಿಷ್ಟ। ವಾಶಿಷ್ಟ ಕೃಷ್ಣ। ನಿರುತ ಎನ್ನಯ ಅರಿಷ್ಟ। ಪರಿಹರಿಸುವದು ಕಷ್ಟದೊಳುತ್ಕೃಷ್ಟ ಮೆರೆವ ಉನ್ನತ ವಿಶಿಷ್ಟ।। ಸುರನರ ಉರಗಕಿನ್ನರ ಗಂಧರ್ವರು। ಕರಕಮಲ ಗಳಿಂದ ವರಗೊಂಬ।। ಸಿರಿ ಅರಸನೆನಮ್ಮ ವಿಜಯವಿಠ್ಠಲಾಪರ। ಶರಸುತ ಬಲುವಿಸ್ತಾರ ಜ್ಞಾನಾಂಭುದೆ।।3।।

## ಅನಿಲ ಹೃತ್ಕುಮುದೇಂದು ವೇದವ್ಯಾಸ

ಅನಿಲ ಹೃತ್ಕಮುದೇಂದು ವೇದವ್ಯಾಸ। ಎನಗಿನ್ನು ತವಧ್ಯಾನ ಸುಖವೀಯೋ ಶ್ರೀಶಾ।।ಪ।। ಚಿದಚಿದ್ವಿಲಕ್ಷಣನೆ ಚಿತ್ರ ಚಾರಿತ್ರನೇ। ಚತುರಾಸ್ಯಪಿತ ನೀನು ಸುರ ಚಕ್ರವರ್ತಿ। ಚತುರ ರೂಪವಧರಿಸಿ ಚತುರವ್ಯೂಹವರಚಿಸಿ। ಚತುರವಿಧಸೃಷ್ಟಿಯನು ಚತುರ ವಿರಚಿಸಿದೆ।।1।। ಮುನಿ ಪರಾಶರತನುಜ ಶ್ರೀನಿಕೇತನ ಹರಿಯೆ। ಎನಗರುಹು ವೇದಾರ್ಥವೇದವ್ಯಾಸಾ। ಘನ ಮಹಿಮಕೋಟಿ ನಿಖಿಲಾಂಡನಾಯಕನೆ। ಅನಘನೀ ಸಲಹಯ್ಯ ಕಪಿಲ ರೂಪಾತ್ಮಾ।।2।। ಸಚ್ಛಾಸ್ತ್ರ ಕರ್ತೃ ಸತ್ ಸೂತ್ರಗಳ ನಿರ್ಮಾತೃ। ಸಚ್ಛಾಸ್ತ್ರ ಭಾವವರುಹೆ ಬುಧ ಜನರಿಗೇ। ಮತ್ಸ್ಯಾದಿ ರೂಪ ನೀನಿಚ್ಛೆಯಿಂದಲಿ ಪೊಂದಿ। ವತ್ಸರ್ಗೆ ಬೋಧಿಸಿದೆ ಸಚ್ಚಿದಾನಂದ।।3।। ಮೂಲ ಪ್ರಕೃತಿಯ ಮಾನಿ ಮಹಲಕ್ಷ್ಮಿ ನಿನ್ನಯ। ಶೀಲಗಳ ನನುಸರಿಸಿ ಸೇವಿಸುವಳು। ಪ್ರಳಯಕಾಲದಿ ನಿನ್ನ ಒಲುಮೆ ಗೋಸುಗವಟದ। ಎಲೆಯ ರೂಪದಿ ಮಲಗಲನುವಾದಳಯ್ಯ।।4।। ಬಾದಾರಾಯಣ ಮೂರ್ತಿ ಬದಲಿಕ್ಷೇತ್ರದಿ ಪೂರ್ಣ। ಬೋಧರ ಸುಸೇವೆಯನು ಸ್ವೀಕರಿಸುವೆ। ಮೋದಗುಣ ಪೂರ್ಣ ಗುರುಗೋವಿಂದವಿಠಲನೆ। ಹೇದಯಾಂಬುಧೆ ನಿನ್ನ ಪಾದಾಬ್ಜ ತೋರೋ।।5।।

### ದಿತ್ತಾ ವೇದವ್ಯಾಸತೋ (ಮರಾಠಿ)

ದಿತ್ತಾ ವೇದವ್ಯಾಸತೋ। ಯತಿ ವೇಷ ಸುಂದರ ಮೂರ್ತಿತೋ। ಕಾವಿ ಕಮಂಡಲ ಕೌಪಿನ ಧಾರಿತೋ। ಬ್ರಹ್ಮಸೂತ್ರ ಪದ್ಮಾಸನ ಧಾರಿತೋ ಸತ್ಯ ಕಾರ್ಣಿಕೆ ಚೋದ್ವಿ ಭುಜಧಾರಿತೋ। ಕಾಶೀ ಮಠಾಚೋ। ಆರಾಧ್ಯ ದೇವುತೋ ಸುದೀಂದ್ರ ಸ್ವಾಮ್ಯಾಲೇ। ಪೂಜನ ಘೆತ್ತಾ ವ್ಯಾಸುತೋ॥

### ಏಕಂ ಸತ್ ವಿಪ್ರಾಃ ಬಹುಧಾವದಂತಿ

ಏಕಂ ಸತ್ ವಿಪ್ರಾಃ ಬಹುಧಾವದಂತಿ॥ ಶಂಕರ ಶ್ರೀರಾಮಾನುಜಮದ್ವ। ಗುರುತ್ರಯ ಚರಣಂ ನಮಾಮ್ಯಾಹಂ। ದ್ವೈತ ಅದ್ವೈತ ವಿಶಿಷ್ಟಾದ್ವೈತ। ತತ್ವಾ ಬೋಧಂ ಸುಧಾಕರಂ। ಗುರು ಹರಿ ಗುರುಹರ ಗುರುಬ್ರಹ್ಮ। ಗುರವೇ ಸಾಕ್ಷಾತ್ ಪರಬ್ರಹ್ಮ॥

### ಅಪಾದ ಮೌಳಿ ಪರ್ಯಂತಂ

ಅಪಾದ ಮೌಳಿಪರ್ಯಂತಂ ಗುರೂಣಾಂ ಆಕೃತಿಂ ಭಜೇತ್। ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ॥

### ಸಪ್ತ ಸಾಗರ ಪರ್ಯಂತಂ

ಸಪ್ತಸಾಗರ ಪರ್ಯಂತಂ ತೀರ್ಥಸ್ನಾನಫಲಂ ಯಥಾ। ಗುರೋರಂಘ್ರಿಜಲೇ ಬಿಂದು ಸಹಸ್ರಾಂಶ ನ ಪೂರಯೇತ್॥



## ಆಚಾರ್ಯತ್ರಯರು

ಶಂಕರ ಶ್ರೀರಾಮಾನುಜ ಮದ್ವ। ಗುರುತ್ರಯ ಚರಣಂ ನಮಾಮ್ಯಹಂ। ದ್ವೈತ ಅದ್ವೈತ ವಿಶಿಷ್ಟಾದ್ವೈತ।
ತತ್ವಾಬೋಧಂ ಸುಧಾಕರಂ। ಗುರುಹರಿಗುರುಹರ ಗುರುಬ್ರಹ್ಮ। ಗುರವೇ ಸಾಕ್ಷಾತ್ ಪರಬ್ರಹ್ಮ॥

## ಶ್ರೀ ಶಂಕರಾಚಾರ್ಯ

ಸದಾಶಿವ ಸಮಾರಂಭಾಂ ಶಂಕರಾಚಾರ್ಯ ಮಧ್ಯಮಾಂ।
ಅಸ್ಮದಾಚಾರ್ಯ ಪರ್ಯಂತಾಂ ವಂದೇ ಗುರು ಪರಂಪರಾಮ್॥
ಶಂಕರಂ ಶಂಕರಾಚಾರ್ಯಂ ಕೇಶವಂ ಬಾದರಾಯಣಮ್। ಸೂತ್ರಭಾಷ್ಯ ಕೃತೌ ವಂದೇ ಭಗವಂತೌ ಪುನಃ ಪುನಃ॥

ಶೃತಿ ಸ್ಮೃತಿ ಪುರಾಣಾನಾಮಾಲಯಂ ಕುರುಣಾಲಯಂ। ನಮಾಮಿ ಭಗವತ್ಪಾದಂ ಶಂಕರಂ ಲೋಕ ಶಂಕರಮ್॥

ಅಷ್ಟವರ್ಷೇ ಚತುರ್ವೇದೀ ದ್ವಾದಶೇ ಸರ್ವಶಾಸ್ತ್ರವಿತ್। ಷೋಡಶೇ ಕೃತವಾನ್ ಭಾಷ್ಯಂ ದ್ವಾತ್ರಿಂಶೇ ಮುನಿರಭ್ಯಗಾತ್॥

ವಕ್ತಾರಮಾಸಾದ್ಯ ಯಮೇವ ನಿತ್ಯಾಸರಸ್ವತೀ ಸ್ವಾರ್ಥ ಸಮನ್ವಿತಾಸೀತ್। ನಿರಸ್ತ ದುಸ್ತರ್ಕ ಕಲಂಕ ಪಂಕಾ ನಮಾಮಿ ತಂ ಶಂಕರಮರ್ಚಿತಾಂಘ್ರಿ॥

ಶ್ರೀ ಶಂಕರಾಚಾರ್ಯ ಮಥಾಸ್ಯ। ಪದ್ಮಪಾದಂ ಚ ಹಸ್ತಾಮಲಕಂ ಚ ಶಿಷ್ಯಂ। ತಂ ತೋಟಕಂ ವಾರ್ತಿಕ ಕಾರ ಮನ್ಯಾನ್। ಅಸ್ಮದ್ಗುರೂನ್ ಸಂತತ ಮಾನಸ್ಮೋಸ್ಮಿ॥

ಗುರುಚರಣಾಂಬುಜ ನಿರ್ಭರ ಭಕ್ತಃ। ಸಂಸಾರಾದಚಿರಾದ್ಭವ ಮುಕ್ತಃ।

ಸೇಂದ್ರಿಯ ಮಾನಸ ನಿಯಮಾ ದೇವಂ। ದ್ರಕ್ಷ್ಯಸಿ ನಿಜ ಹೃದಯಸ್ಥಂ ದೇವಂ॥

**ಶಂಕರಾಚಾರ್ಯ ನಮೋ (ಕೀರ್ತನೆ)** **ರಾಗ: ಶಂಕರಾಭರಣ-ಆದಿತಾಳ**

ಶಂಕರಾಚಾರ್ಯ ನಮೋ ನಮೋ। ಅದ್ವೈತ ಸಂಪ್ರದಾಯ। ಪ್ರವರ್ತಕ ಮಾಂ ಪಾಹಿ।।ಪ।। ಕಾಲಟಿನಗರ ಸಂಜಾತಂ। ಕಾಶೀಪೀಠ ವಿದ್ಯಾದಾಯಕಂ ಪದ್ಮಪಾದ ಸಕಲ ಶಿಷ್ಯ ಉದ್ಧಾರಕಂ।।ಅ.ಪ।। ಶೃಂಗೇರಿ ಶಾರದಾಂಬ ಸಂಸ್ಥಾಪಕಂ ಸರ್ವಧರ್ಮ ಪ್ರವರ್ತಕಂ ।।ಚರಣ।।



## ಶ್ರೀ ರಾಮಾನುಜಾಚಾರ್ಯ

ಯೋ ನಿತ್ಯಮಚ್ಯುತ ಪದಾಂಬುಜ ಯುಗ್ಮರುಕ್ಮ ವ್ಯಾಮೋಹತಸ್ತದಿತರಾನಿ ತೃಣಾಯಮೇನೇ।
ಅಸ್ಮದ್ಗುರೋರ್ ಭಗವತೋಽಸ್ಯ ದಯೈಕಸಿಂಧೋಃ ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ।।

ಚೈತ್ರಾರ್ದ್ರ ಸಂಭವಂ ವಿಷ್ಣೋರ್ದರ್ಶನ ಸ್ಥಾಪನೋತ್ಸುಕಂ।
ತುಂಡೀರ ಮಂಡಲೇ ಶೇಷಮೂರ್ತಿಂ ರಾಮಾನುಜಂ ಭಜೇ।।

ಪುಣ್ಯಾಂಭೋಜ ವಿಕಾಸಾಯ ಪಾಪಧ್ವಾಂತಕ ಕ್ಷಯಾಯಚ। ಶ್ರಾಮಾನಾವಿರ ಭೂದ್ಭೂಮೌ ರಾಮಾನುಜ ದಿವಾಕರಃ।।

ತಸ್ಮೈ ರಾಮಾನುಜಾಚಾರ್ಯಾಯ ನಮಃ ಪರಮಯೋಗಿನೇ। ಯಃ ಶೃತಿ ಸ್ಮೃತಿ ಸೂತ್ರಾಣಾಂ ಅಂತರ್ಜ್ವರಮಶೀಶಮತ್।।

ನಮಃ ಪ್ರಣವ ಶೋಭಿತಂ ನವಕಾಷಾಯ ಖಂಡಾಂಬರಂ। ತ್ರಿದಂಡ ಪರಿಮಂಡಿತಂ ತ್ರಿವಿಧ ತತ್ತ್ವನಿರ್ವಾಹಕಂ।।

ದಯಾಂಚಿತ ದೃಗಂಚಲಂ ದಳಿತವಾದಿ ವಾಗ್ವೈಭವಂ। ಶಮಾದಿಗುಣಸಾಗರಂ ಶರಣಮೇಮಿ ರಾಮಾನುಜಂ।।

ಶ್ರೀ ಭಾಷ್ಯಕಾರ ಭಗವಾನ್ ಯತಿಸಾರ್ವಭೌಮ। ಶ್ರೀಭೂತದಿವ್ಯ ನಗರೀಕೃತ ನಿತ್ಯವಾಸ।
ಶ್ರೀದೇವರಾಜ ಚರಣಾಂಬುರುಹಾಂತರಂಗ। ರಾಮಾನುಜಾರ್ಯ ಚರಣೌ ಶರಣಂ ಪ್ರಪದ್ಯೆ।।

### ಲಕ್ಷ್ಮೀನಾಥ ಸಮಾರಂಭಾಂ

ಲಕ್ಷ್ಮೀನಾಥ ಸಮಾರಂಭಾಂ ನಾಥಯಾಮುನಮಧ್ಯಮಾಮ್।
ಅಸ್ಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್।।

### ಭೂತಂ ಸರಶ್ಚ ಮಹದಾಹ್ವಯ

ಭೂತಂ ಸರಶ್ಚ ಮಹದಾಹ್ವಯ ಭಟ್ಟನಾಥ ಶ್ರೀ ಭಕ್ತಿ ಸಾರಕುಲಶೇಖರಯೋಗಿವಾಹಾನ್।
ಭಕ್ತಾಂಘ್ರಿರೇಣುಪರಕಾಲ ಯತೀಂದ್ರ ಮಿಶ್ರಾನ್ ಶ್ರೀಮತ್ಪರಾಂಕುಶಮುನಿಂ ಪ್ರಣತೋಽಸ್ಮಿ ನಿತ್ಯಮ್।।

### ಪಿತಾಮಹಸ್ಯಾಪಿ ಪಿತಾಮಹೋ

ಪಿತಾಮಹಸ್ಯಾಪಿ ಪಿತಾಮಹೋ ಯಃ ಪ್ರಾಚೇತ ಸಾದೇಶ ಫಲಪ್ರದಾಯ
ಶ್ರೀ ಭಾಷ್ಯಕಾರೋತ್ತಮದೇಶಿಕಾಯ ಶ್ರೀಶೈಲಪೂರ್ಣಾಯ ನಮೋ ನಮೋಸ್ತುತೆ।।

### ಅಸ್ಮದ್ದೇಶಿಕಮಸ್ಮದೀಯ (ಆಚಾರ್ಯ ಪರಂಪರೆ)

ಅಸ್ಮದ್ದೇಶಿಕಮಸ್ಮದೀಯ ಪರಮಾಚಾರ್ಯನ್ ಅಶೇಷಾನ್ ಗುರೂನ್ ಶ್ರೀಮಲ್ಲಕ್ಷ್ಮಣಯೋಗಿ ಪುಂಗವ ಮಹಾಪೂರ್ಣಾ ಮುನಿಂ ಯಾಮುನಂ। ರಾಮಂ ಪದ್ಮವಿಲೋಚನಂ ಮುನಿವರಂ ನಾಥಂ ಶಠದ್ವೇಷಿಣಮ್। ಸೇನೇಶಂ ಶ್ರೀಯಮಿಂದಿರಾಸಹಚರಂ ನಾರಾಯಣಂ ಸಂಶ್ರಯೇ।।

### ಕುಂಭೇ ಪುನರ್ವಸೌ ಜಾತಂ

ಕುಂಭೇ ಪುನರ್ವಸೌ ಜಾತಂ ಕೇರಳೇ ಚೋಳಪಟ್ಟಣೇ।। ಕೌಸ್ತುಭಾಂಶಂ ಧರಾಧೀಶಂ ಕುಲಶೇಖರಮಾಶ್ರಯೇ।। ಘುಷ್ಯತೇ ಯಸ್ಯ ನಗರೇ ರಜ್ಗಯಾತ್ರ ದಿನೇ ದಿನೇ।। ತಮಹಂ ಶಿರಸಾ ವಂದೇ ರಾಜಾನಂ ಕುಲಶೇಖರಂ।।

### ರಾಮಾನುಜರೇ ನಮೋ ನಮೋ — ರಾಗ: ಕಾಂಭೋಜಿ

ರಾಮಾನುಜರೇ ನಮೋ ನಮೋ। ಸ್ವಾಮಿಲಕ್ಷ್ಮಣರೂಪ ನಮೋ ನಮೋ।।ಪ।। ಪಿಡಿದಿರೆ ದಂಡಿಕಾ ವೇಷ್ಟಿ-ಮೃದಿಕಾ। ನಿಡುಶಿಖಿ ಯಜ್ಞೋಪವೀತದಿಂದ।। ತೊಡೆದ ದ್ವಾದಶನಾಮ ಶ್ರೀಚೂರ್ಣದಿ ಒಪ್ಪುವ। ಒಡೆಯ ರಾಮಾನುಜರೇ ನಮೋ ನಮೋ।।1।। ಪಂಕಜನಾಭನ ಪಾವನ ಮೂರುತಿ। ಶಂಕೆಯಿಲ್ಲದೆ ನೆನೆವರ ಪಾಲಿಪನೆ। ಮುಂಕೊಂಡು ಶ್ರುತಿಮತ ಚಾರ್ವಾಕರ ಗೆದ್ದ। ಓಂಕಾರಮೂರುತಿ ನಮೋ ನಮೋ।।2।। ಕೇಶವ ಪಾದಾಂಬುಜ ಮಧುಕರಾ। ಪಾಷಂಡ ಗರ್ವಿಗಳೆಲ್ಲರ ಗುರುತಿಲಕ। ಶೇಷಾವತಾರಿ ಮುನೀಶವಂದಿತ ಆದಿ। ಕೇಶವಮೂರುತಿ ನಮೋ ನಮೋ।।3।।



## ಶ್ರೀ ಮಧ್ವಾಚಾರ್ಯ(ಶ್ರೀ ಆನಂದತೀರ್ಥರು)

ಯೋವಿಪ್ರಲಂಬ ವಿಪರೀತ ಮತಿ ಪ್ರಭೂತಾನ್। ವಾದಾನ್ ನಿರಸ್ಯ ಕೃತವಾನ್ ಭುವಿತತ್ವವಾದಮ್।।
ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತಂ। ಆನಂದತೀರ್ಥ ಮುನಿವರ್ಯಮಹಂ ನಮಾಮಿ।।

ಆನಂದತೀರ್ಥಾಯ ಗುರು ಪ್ರಸನ್ನಂ। ಜ್ಞಾನ ಸ್ವರೂಪಂ ನಿಜಲಾಭಪೂರ್ಣಮ್।।
ಯೋಗಿವಂದ್ಯಂ ಭವರೋಗ ವೈದ್ಯಂ। ಶ್ರೀ ಮಧ್ವನಾಥಂ ಸ್ವಗುರುಂ ನಮಾಮಿ।।

ಶ್ರೀಮದಾನಂದ ತೀರ್ಥಾಯ ಪಾದಪಂಕಜರೇಣವಃ। ಪವಿತ್ರಯಂತು ಮಾಂ ನಿತ್ಯಂ ಪಾಪಪಾಟನ ಪಂಡಿತಾಃ।।
ಅಭ್ರಮಂ ಭಂಗರಹಿತಮಜಡಂ ವಿಮಲಂ ಸದಾ। ಆನಂದ ತೀರ್ಥಮತುಲಂ ಭಜೇ ತಾಪತ್ರಯಾಪಹಮ್।।

### ಎಂತು ಪೊಗಳಲೋ ನಿನ್ನ

ಎಂತು ಪೊಗಳಲೋ ನಿನ್ನ-ಯತಿಕುಲ ಶಿರೋರನ್ನ।।ಪ।। ಶಾಂತ ಮಧ್ವಾಚಾರ್ಯ ಸಂತ ಕುಲವರ್ಯ।।ಅ.ಪ.।। ಪ್ರಥಮಾವತಾರದಲಿ ವ್ರತತಿ ರಾಮನ ಭಜಿಸಿ। ಅತಿ ಪಂಥದಿಂದ ಶರಧಿಯನು ದಾಟಿ। ಕ್ಷಿತಿಜೆಗಂಕಿತವಿತ್ತು ಪೂದೋಟವನು ಕಿತ್ತೆ। ಪ್ರತಿಗಾಣೆ ನಿನಗೆ ಅಪ್ರತಿ ಪರಾಕ್ರಮಿಯೆ।।1।। ದ್ವಿತಿಯಾವತಾರದಲಿ ದೇವಕೀಜನ ಕಂಡು। ಸತಿಗೆ ಕಾಮಿಸಿದವನ ಸಾಹಸದಿ ಸದೆದೆ। ಪ್ರತಿಯಾದ ಮಾಗಧನ ಪೃತನದಲಿ ನೀಕೊಂದೆ। ಪ್ರತಿಯಕಾಣೆನೊ ನಿನಗೆ ಮೂಜ್ಜಗದೊಳಗೆ।।2।। ತೃತಿಯಾವತಾರದಲಿ ತ್ರಿಜಗನುತಿಸಲು ಬಂದು। ಯತಿಯಾಗಿ ಮಹಾಮಹಿಮನನು ಭಜಿಸಿದೆ। ಕ್ಷಿತಿಗಧಿಕ ಉಡುಪಿಯಲಿ ಕೃಷ್ಣನ್ನ ನಿಲಿಸಿ ಪ್ರತಿ। ಮತಮತವ ಮುರಿದೆ ಪೂರ್ಣಪ್ರಜ್ಞ ಮುನಿವರನೆ।।3।।

### ಜಯ ಜಯತು ಶುಭಕಾಯ — ರಾಗ: ನಾಟ-ಝಂಪೆತಾಳ

ಜಯ ಜಯತು ಶುಭಕಾಯ ಜಯ ಜಯತು ಹರಿಪ್ರಿಯ। ಜಯ ಜಯತು ಜೀಯ ಮಧ್ವಾಖ್ಯ ಮುನಿರಾಯ।।ಪ।। ರಾಮಾವತಾರದಲಿ ಹನುಮಂತನಾಗಿ ನೀ ತಾಮಸನ ಪುರವನನಲ ಗಾಹುತಿಯನಿತ್ತೆ। ಭೂಮಿಜೆಯ ಕುಶಲವನು ರಘುನಾಥಗರುಹಿದೆ ಸ್ವಾಮಿಕಾರ್ಯವ ವಹಿಸಿ ಖಳರ ನೀ ತರಿದೆ।।1।। ದ್ವಾಪರಾಂತ್ಯದಲಿ ಶ್ರೀಕೃಷ್ಣನಂಘ್ರಿಯ ಭಜಿಸಿ ಪಾಪಿ ಮಾಗಧ ಬಕರ ಕೀಚಕಾದಿಗಳ। ಕೋಪದಿಂದಲಿ ತರಿದು ಕುರುಕುಲವ ಸವರಿ ಪ್ರತಾಪದಿಂದಲಿ ಮೆರೆದೆ ಖಳರ ನೀ ಮುರಿದೆ।।2।। ಮಾಯಿಗಳು ಹೆಚ್ಚಿ ಮತವೆಲ್ಲ ಸಂಕರವಾಗೆ ತಾಯಿಯಿಲ್ಲದ ಶಿಶುಗಳಂತೆ ಸುಜನರಿರಲು ನೀಯವತರಿಸಿ ಮತವೆಲ್ಲ ಮತವೆಲ್ಲ ಉದ್ಧರಿಸಿ ನಾರಾಯಣನೆ ಮೂಜಗಕೆ ಪರದೈವವೆಂದೊರೆದೆ।।3।। ದುರುಳ

ವಾದಿಗಳಿಗುತ್ತರವ ಕೊಡಬೇಕೆನುತ ಸರುವ ಸ್ತ್ರಾಮೃತವ ಸೃಜಿಸಿ ವಾಕ್ಯಗಳ ದರುಶನ ಗ್ರಂಥಗಳ ಒಲಿದು ಶಿಷ್ಯಗಿತ್ತೆ ಪರಮತತ್ತ್ವದ ಖಣಿಯೆ ಗುರುಶಿರೋಮಣಿಯೆ॥4॥ ನಿನ್ನ ಮತವೇ ವೇದಶಾಸ್ತ್ರಗಳ ಸಮ್ಮತವು ನಿನ್ನ ಮತವೇ ಇಹ ಪರಂಗಳಿಗೆ ಸಾಧನವು ಪನ್ನಂಗಶಯನ ಶ್ರೀಹಯವದನದಾಸರೊಳು ನಿನ್ನಪೋಲುವರುಂಟೆ ಮಧ್ವಮುನಿರಾಯ ॥5॥

## ಇಂದಿನ ದಿನ ಸುದಿನವಾಯಿತು

ಇಂದಿನ ದಿನ ಸುದಿನವಾಯಿತು॥ಪ॥ ಇಂದಿರೇಶ ಮೂಲರಾಮ ಚಂದ್ರನ ಪದಕಮಲಗಳನು ಸುರೇಂದ್ರತೀರ್ಥಮುನಿಯು ತಂದು ತೋರಲು॥ಅ.ಪ.॥ಈತನ ಪದಕಮಲಗಳ ವಿಧಾತ ತನ್ನ ಭವನದೊಳಗೆ। ಸೀತೆಯ ಸಹ ಪೂಜಿಸಿ ಇಕ್ಷ್ವಾಕು ನೃಪನಿಗಿತ್ತನು॥ ಆತನನ್ವಯನೃಪರೆಲ್ಲರು ಪ್ರೀತಿಯಿಂದಲಿ ಭಜಿಸಿ ರಘು। ನಾಥ ವೇದಗರ್ಭಗಿತ್ತ ಮೂರ್ತಿಯ ಪದಕಮಲಕಂಡೆ॥1॥ ಗಜಪತಿ ಭಾಂಡಾರದಲಿ ಅಜಕರಕಮಲಾರ್ಚಿತ ಭೂಮಿಜೆ ಸಹಿತದಿ ರಾಮನಿರಲು ನಿಜ ಜ್ಞಾನದಿ ತಿಳಿದು ಬೇಗ॥ ದ್ವಿಜವರಗುರುವೆನಿಸುತಿಪ್ಪ ಸುಜನವಂಶ ನರಹರಿಮುನಿ। ರಜನಿಯಲ್ಲಿ ತಂದ ಸುಲೋಹಜಮಯ ಪ್ರತಿಮೆಯಕಂಡು॥2॥ ಅಂದವುಳ್ಳ ಮೂಲರಾಮ ಚಂದ್ರನ ಪದಕಮಲ ಗಳನು। ವೃಂದಾರಕ ವೃಂದವಂದ್ಯನೆಂದೆನಿಸುವ ಪವನನಾ। ನಂದ ಗುರು ಶ್ರೀಮದಾನಂದತೀರ್ಥ ರರ್ಚಿಸಿ ನಿಜ। ಅಂದದನ್ವಯದೊಳಿಟ್ಟ ಪುರಂದರನ ವಿಠಲನ ಕಂಡು ॥3॥

## ಮಧ್ವರಾಯರ ಪಾದ ನಂಬೋ

ಮಧ್ವರಾಯರ ಪಾದ ನಂಬೋ ಸು-ಸಿದ್ಧಾಂತಸಾರವ ಹೃದಯದಿ ತುಂಬೋ॥ಪ॥ ಶತಕೋಟಿಜನ್ಮಸುಕೃತದಿ - ಅತುಳವೈಷ್ಣವಜನ್ಮ ದೊರಕಿತು ನಿಜದಿ॥ ಸತತ ಸಜ್ಜನ ಪಾದರಜದಿ- ದುರ್ವಿಷಯಗಳನು ನಿಗ್ರಹಿಸೊ ನೀ ತ್ವರದಿ॥1॥ ಸತ್ಯಂಜಗತಿದು ನೆಚ್ಚೊ ಸರ್ವೋತ್ತಮ ಹರಿಯೆಂಬೊ ಮಾತನು ಮೆಚ್ಚೊ ಉತ್ತಮಾನಿಲಮತ ಹೆಚ್ಚೋ ನಿತ್ಯ-ಮಿಥ್ಯವಾದಿಯ ಮತಕನಲನ ಹಚ್ಚೊ॥2॥ ಈತನ ವಾಕ್ಯವೆ ಸರ್ವವೇದ-ಮಾತು ಗಳೆಂದರಿಯೊ ವಿಷ್ಣುಶರ್ವ-ಧಾತೃಗಳೊಂದೆಂಬ ದುರ್ವಾದಿ-ವ್ರಾತದುರ್ಗಜಕೆ ಕೇಸರಿಯಾಗಿರುವ॥3॥ ಮೋದದಿ ಬದರಿಕಾಶ್ರಮದಿ ಶ್ರೀಮ-ದ್ಬಾದರಾಯಣನಂಘ್ರೀ ಸೇವಾಸಾಧನದಿ ಸಾಧಿಸಿದನು ಪ್ರತಿಕ್ಷಣದಿ ಶತ-ಮೋದರಾಯನ ಪದ ಪರಮಸಂಭ್ರಮದಿ॥4॥ ವಟುವೃಷ್ಣಿ ವಂಶಲಲಾಮ- ತಟಿತಾಭ ಜಗನಾಥವಿಠಲಗೆ ಪ್ರೇಮಾ ಸ್ಫುಟರೂಪತ್ರಯನೆ ನಿಷ್ಕರ್ಮಾನಿ-ಷ್ಕುಟಿಲ ಭಾರತೀರಮಣ ಹನುಮಂತ ಭೀಮ॥5॥

## ಮಧ್ವಮುನಿಯೆ ಎನ್ನ ಹೃತ್ಕುಮುದಚಂದ್ರ

ಮಧ್ವಮುನಿಯೆ ಎನ್ನ ಹೃತ್ಕುಮುದಚಂದ್ರ-ಅದ್ವೈತ ತಮತಾರಣ್ಯದಹನ ಗುಣಸಾಂದ್ರ॥ಪ॥ ನೊಂದೆ ಎಂಭತ್ನಾಲ್ಕು ಲಕ್ಷಯೋನಿಗಳಲ್ಲಿ। ಒಂದೇ ಪ್ರಕಾರ ಸಂಚರಣೆಯಿಂದ। ಒಂದೊಂದು ಕರ್ಮಗಳನರಸಿನೋಡಲು ಅದ। ರಿಂದ ಭವಾಬ್ಧಿಗೆ ಒಂದುಪಾಯಕಾಣೆ॥1॥ ನೀರುಚಳಪಳ ಕಾಸಿ ಆರಲಿಟ್ಟುಹೆಪ್ಪು। ನೀರಿನಿಂದಲಿ ಕೊಡಲು ಬಪ್ಪುದೇನೋ। ಮಾರುತೀ ನಿನ್ನ ಕೃಪೆ ಪಡೆಯದೆಲೆ

## ಈತನೇ ಕಾಣಿರೋ ಮಧ್ವಮುನಿ

**ರಾಗ: ರೇಗುಪ್ತಿ-ಅಟ್ಟತಾಳ**

ಈತನೇ ಕಾಣಿರೋ ಮಧ್ವಮುನಿ। ಈತನೇ ಕಾಣಿರೋ॥ಪ॥ ಪರಿಪರಿ ಶ್ರುತಿಗಳೆಂಬುವ ಗುಹೆಗಳಲ್ಲಿ ಕೇಸರಿಯಂದದಿ ಚರಿಸುತ್ತ ಹರಿಯೆ ಸರ್ವೋತ್ತಮನೆಂಬಘೋಷಗಳಿಂದ ದುರುಳವಾದಿಗಳೆಂಬ ನರಿಗಳೋಡಿಸಿದಾತ॥1॥ ಸಕಲಾಗಮಗಳೆಂಬ ಶರಧಿಯೊಳಗೆ ಬಲು ಯುಕುತಿಯಿಂದಲಿ ಮಥಿಸಿ ಅಕಳಂಕ ಶ್ರೀಕೃಷ್ಣ ಎಂಬ ರತ್ನವ ಪಡೆದು ಮಕುಟದೊಳಿಟ್ಟು ಲೋಕದಿ ಮೆರೆಸಿದಾತ॥2॥ ವೇದಸಾರವಾದ ಈಶತತ್ತ್ವವೆಂಬ ಸುಧೆಯ ಕಲ್ಪಿಸಿಕೊಂಡು ಆದಿಮೂರುತಿ ಶ್ರೀಹಯವದನನ ಪಾದ ಆರಾಧಕರಿಗಿತ್ತು ಮೋದಪಡಿಸಿದಾತ॥3॥

### ಗುರು ಮಧ್ವಮುನಿರನ್ನ ಮೂರುಪರಿಯದೋರಿದೆ

ಗುರು ಮಧ್ವಮುನಿರನ್ನ ಮೂರುಪರಿಯದೋರಿದೆ ನಿನ್ನ। ಹರಭಕ್ತಿಯಲಿ ಅವಿಚ್ಛಿನ್ನ ಸರಿಯಾರು ಧರೆಯೊಳು ನಿನ್ನ। ಸ್ಮರಣೆಯಲಿಹೆ ರಾಮನ ಪರಮಪಾವನ್ನ॥1॥ ಅತಿಬಾಹು ಪರಾಕ್ರಮ ಕ್ಷಿತಿಯೊಳು ನಿನ್ನದೇ ನೇಮ। ಪ್ರಥಮದಲ್ಯಾದೆ ಹನುಮ ದ್ವಿತೀಯದಲ್ಯಾದೆ ಭೀಮ। ತೃತೀಯಲ್ಲಿ ಪೂರ್ಣಪ್ರಜ್ಞನೆನಿಸಿದೆ ನಿಸ್ಸೀಮ॥2॥ ಸಾಹ್ಯಕ್ಕೆ ಕಾರಣ ಮಹಾದೈತ್ಯರ ಮರ್ಧನ। ಶ್ರೀಹರಿ ಸಾನ್ನಿಧ್ಯ ಪೂರ್ಣ ಇಹ ಸಕಲ ನಿಪುಣ। ಮಹಿಪತಿ ಮುಖ್ಯಪ್ರಾಣ ಸ್ವಹಿತ ಸಾಧನ॥3॥

### ನೆರೆನಂಬಿ ಪಡೆಯಿರೋ ಹಿತವನಮ್ಮ

ನೆರೆನಂಬಿ ಪಡೆಯಿರೋ ಹಿತವನಮ್ಮ॥ಪ॥ ಗುರುವಾದ ಮಧ್ವಮುನಿಯ ಸಮ್ಮತವ॥ಅ.ಪ॥ ತ್ರೇತೆಯೊಳಂಜನಾತನಯನಾಗಿ। ಸೀತಾರಮಣ ರಘುನಾಥಗೆ ಪ್ರಿಯ॥ ದೂತತನದಿ ಖಳತತಿಯ ಕೊಂದು। ಖ್ಯಾತಿಪಡೆದ ಹನುಮನಾದ ಯತಿಯ॥1॥ ದ್ವಾಪರದೊಳು ಭೀಮನೆನಿಸಿ ಪಾಂಡು। ಭೂಪನರಸಿ ಕುಂತಿದೇವಿಯೊಳುದಿಸಿ॥ ಶ್ರೀಪತಿಗರ್ಥಿಯ ಸಲಿಸಿ ನೃಪಾನ್ನಪ। ಪಾಪರೆಲ್ಲರ ಕೊಂದ ಮಹಿಮನ್ನ ಭಜಿಸಿ॥2॥ ಕಲಿಯುಗದೊಳು ಯತಿಯಾಗಿ ಈ ಇಳೆಯ ದುಶ್ಶಾಸ್ತ್ರವ ಮುರಿದ ವಿರಾಗಿ॥ ಕುಲ ಗುರು ಶ್ರೀ ಮಧ್ವಯೋಗಿನಮ್ಮ। ಚೆಲುವ ಹಯವದನನ ಭಂಟನೆಂದು ಬಾಗಿ॥3॥

### ಮಧ್ವರಾಯರ ಕರುಣೆ

ಮಧ್ವರಾಯರ ಕರುಣೆ ಪಡೆಯಿರೊ॥ಪ॥ ಸಿದ್ಧವು ಇಹಪರದಿ ಸೌಖ್ಯವು॥ಅ.ಪ.॥ ವೀರ ವೈಷ್ಣವ ಮತ ತೋರಿದವರ ನಂಬೀ। ವೀರ ವೈಷ್ಣವರಾಗಿ ಬಾಳಿರೋ॥1॥ ಸತ್ಯ ಧರ್ಮಗಳಿಗೆ ಮೂರ್ತಿಗಳಾದ ಜೀವೋತ್ತಮರನು ನಂಬಿ ಬಾಳಿರೋ॥2॥ ಉನ್ನತ ಧ್ಯೇಯದ ಸ್ವರ್ಣದಕ್ಷರದಲ್ಲಿ ಚೆನ್ನಾಗಿ ಬೋಧಿಸಿದ ಪ್ರಸನ್ನಶ್ರೀ॥3॥

### ದಾನವರು ಕಲಿಯುಗದೊಳವತರಿಸಿ

ದಾನವರು ಕಲಿಯುಗದೊಳವತರಿಸಿ ಸುಜನರಿಗೆ। ವೇನ ಕುಮತವ ಬೋಧಿಪುದನರಿತು। ಜ್ಞಾನಿತಾ ಪವಮಾನ ಭೂತಳದೊಳವತರಿಸಿ। ಮಾನನಿಧಿ ಮಧ್ವಾಖ್ಯನೆಂದೆನಿಸಿದ॥1॥ ಅರ್ಭಕತನವನೀಗಿ ಬದರಿಯಲಿ ಮಧ್ವಮುನಿ। ನಿರ್ಭಯದಿ ಸಕಲಶಾಸ್ತ್ರಾರ್ಥ ಪಠಿಸಿ। ಉರ್ವಿಯೊಳು ಆಮ್ನಾಯದ ತತ್ವಮಾರ್ಗವನು। ಸರ್ವಸುಜನರಿಗೆ ಅರುಹಿದ ಮೋದದ॥2॥ ಸರ್ವೇಶ ಹರಿ ವಿಶ್ವವೆಲ್ಲವೂ ಪುಸಿಯೆಂಬ ದುರ್ವಾದಿಗಳ ಮತವ ನೆರೆ ಖಂಡಿಸಿ। ಸರ್ವೇಶ ಹರಿ ವಿಶ್ವಸತ್ಯವೆಂದರುಹಿದ। ಶರ್ವಾದಿ ಗೀರ್ವಾಣ ಸಂತತಿಯಲಿ॥3॥ ಏಕವಿಂಶತಿ ಕುಭಾಷ್ಯಗಳ ಹೇರನು ತಂದು। ಶ್ರೀರಾಚಿ-ತನೊಲುಮೆ ಶಾಸ್ತ್ರರಚಿಸಿ। ಲೋಕತ್ರಯದೊಳಿದ್ದ ಸುರರು ಆಲಿಸುವಂತೆ। ಆ ಕಮಲನಾಭ ಯತನಿಕರಕೊರೆದ॥4॥ ಬದರಿಕಾಶ್ರಮಕ್ಕೆ ಪುನರಪಿ ಪೋಗಿ ವ್ಯಾಸ ಮುನಿ। ಪದಕೆರಗಿ ಸಕಲ ವೇದಾರ್ಥಗಳನು। ಪದುಮನಾಭನ ಮುಖದಿ ತಿಳಿದು ಬ್ರಹ್ಮತ್ವಯ್ಯೆದಿದ ಮಧ್ವಮುನಿರಾಯಗಭಿ। ನಮಿಪೆನು॥5॥ ಜಯ ಜಯತು ದುರ್ವಾದಿ ಮತತಿಮಿರ ಮಾರ್ತಾಂಡ। ಜಯಜಯತು ವಾದಿಗಜ ಪಂಚಾನನ। ಜಯ ಜಯತು ಚಾರ್ವಕ ಗರ್ವ ಪರ್ವತ ಕುಲಿಶ। ಜಯ ಜಯತು ಜಗನ್ನಾಥ ಮಧ್ವನಾಥಾ॥6॥ ತುಂಗಕುಲ ಗುರುವರನ ಹೃತ್ಕಮಲದೊಳು ನೆಲೆಸೆ ಭಂಗವಿಲ್ಲದ ಸುಖವ ಸುಖನಕೆಲ್ಲ। ಹಿಂಗದೆ ಕೊಡುವ ಗುರು ಮಧ್ವಾಂತರ್ಯಾಮಿ ಶ್ರೀರಂಗವಿಠ್ಠಲನೆಂದು ನೆರೆನಂಬಿರೋ॥7॥ ಸೋಮಸೂರ್ಯೋ ಪರಾಗದಿ ಗೋಸಹಸ್ರಗಳ ಭೂಮಿ ದೇವರಿಗೆ ಸುರನದಿಯ ತಟದಿ। ಶ್ರೀಮುಕುಂದಾರ್ಪಣ ವೆನುತ ಕೊಟ್ಟ ಫಲಕ್ಕು। ಈ ಮಧ್ವನಾಮ ಬರೆದೋದಿದವರಿಗೆ॥8॥ ಪುತ್ರರಿಲ್ಲದವರು ಸತ್ಪುತ್ರರೈದುವರುಸ। ವ್ರತದಲಿ ದಿಗ್ವಿಜಯವಾಹುದು ಸದಾ। ಶತ್ರುಗಳು ಬೀಳ್ವರಪ ಮೃತ್ಯುಬರಲಂಜುವದು। ಸೂತ್ರನಾಮಕನ ಸಂಸ್ಕೃತಿಮಾತ್ರದಿ॥9॥ ಶ್ರೀಪಾದರಾಜರುಸುರಿದ ಮಧ್ವನಾಮ ಸಂ। ತಾಪವನು ಕಳೆದು ಸೌಖ್ಯವನೀವುದು। ಶ್ರೀಪತಿ ಜಗನ್ನಾಥವಿಠ್ಠಲನ ತೋರಿ ಭವ। ಕೂಪರದಿಂದಾ ಕಡೆಹಾಯಿಸುವುದು॥10॥

## ಮಧ್ವಮತದ ಸಿದ್ಧಾಂತದ

ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬ್ಯಾಡಿ ಬಿಡಬ್ಯಾಡಿ।।ಪ।। ಬಿಟ್ಟು ಕೆಡಬ್ಯಾಡಿ।।ಅ.ಪ।। ಹರಿಸರ್ವೋತ್ತಮ ನಹುದೆಂಬೊ ಜ್ಞಾನವ। ತಾರತಮ್ಯದಿಂದ ತಿಳಿಸುವೊ ಮಾರ್ಗವ।।1।। ಘೋರಯಮನ ಭಯದೂರ ಓಡಿಸಿ ಮುರಾರಿಯ ಚರಣವ ತೋರೋ ಮಾರ್ಗದಲಿ।।2।। ಭಾರತೀಶ ಮುಖ್ಯಪ್ರಾಣಂತರ್ಗತ। ನೀರಜಾಕ್ಷನ ನಮ್ಮ ಪುರಂದರ ವಿಠ್ಠಲ।।3।।

## ಮಧ್ವೇಶಾರ್ಪಣಮಸ್ತು ಮಧ್ವೇಶಾರ್ಪಣ ಮಸ್ತು

ಮಧ್ವೇಶಾರ್ಪಣಮಸ್ತು ಮಧ್ವೇಶಾರ್ಪಣಮಸ್ತು ಮಧ್ವೇಶಾರ್ಪಣಮಸ್ತು। ಶುದ್ಧ ಶ್ರುತಿ ಪದ್ಧತಿ ನಡೆಸುವೆ ಮಧ್ವೇಶಾರ್ಪಣಮಸ್ತು ।।1।। ವಂದಿಸುವೆನು ಗೋವಿಂದನ ಚರಣಕೆ ಮಧ್ವೇಶಾರ್ಪಣಮಸ್ತು। ನಿಂದು ಕರಂಗಳ ವಂದಿಸಿ ಪ್ರಾರ್ಥನೆ ಮಧ್ವೇಶಾರ್ಪಣಮಸ್ತು।।2।। ಅಂಬುಜನಾಭನ ನಿತಂಬಿನಿ ಕಮಲಕೆ ಮಧ್ವೇಶಾರ್ಪಣ ಮಸ್ತು। ಡಿಂಗರಿಗನು ನಾಜಗದಂಟೆಯ ಪ್ರಾರ್ಥನೆ ಮಧ್ವೇಶಾರ್ಪಣ ಮಸ್ತು।।3।। ಸಂಧ್ಯಾದೇವಿಗೆ ವಂದಿಸುತಿರುವೆನು ಮಧ್ವೇಶಾರ್ಪಣ ಮಸ್ತು । ಒಂದಿನ ಬಿಡದೆ ತ್ರಿಕಾಲದಿ ಮಧ್ವೇಶಾರ್ಪಣಮಸ್ತು।।4।। ಚಾಮರ ಹಾಕುವೆ ಶ್ರೀಮನೋಹರಗೆ ಮಧ್ವೇಶಾರ್ಪಣ ಮಸ್ತು ಕೋಮಲ ಶಯನದಿ ಮಲಗಿಸುವೆನು ಮಧ್ವೇಶಾರ್ಪಣಮಸ್ತು।।5।। ಕೃಷ್ಣನ ಮಲಗಿಸಿ ತೊಟ್ಟಿಲ ತೂಗುವೆ ಮಧ್ವೇಶಾರ್ಪರ್ಣಮಸ್ತು। ಬಿಟ್ಟು ಅಭಿಮತ ಘಟ್ಟಿಸಿ ಪಾಡುವೆ ಮಧ್ವೇಶಾರ್ಪಣಮಸ್ತು।।6।। ಶ್ರೀಪತಿ ತೊಟ್ಟಿಲ ಈ ಪರಿ ತೂಗುವೆ ಮಧ್ವೇಶಾರ್ಪಣ ಮಸ್ತು। ಗುರು ಪುಷ್ಕರ ಮುನಿ ಸುರದವಾರದಿ ಮಧ್ವೇಶಾರ್ಪಣ ಮಸ್ತು।।7।। ಕರ್ಮವು ಸಿರಿಯಂದು ಹರಿಗರ್ಪಿಸುವೆ ಮಧ್ವೇಶಾರ್ಪಣಮಸ್ತು। ದಾಸರ ಚರಣಕೆ ಶಿರಬಾಗುವೆ ನಾ ಮಧ್ವೇಶಾರ್ಪಣ ಮಸ್ತು।।8।। ದಾಸರ ಕೃತಿ ಇಂದಿರೇಶಗರ್ಪಿಸುವೆ ಮಧ್ವೇಶಾರ್ಪಣಮಸ್ತು। ಮಧ್ವೇಶಾರ್ಪಣ ಮಧ್ವೇಶಾರ್ಪಣ ಮಧ್ವೇಶಾರ್ಪಣ ಮಸ್ತು।।9।।

## ಮಧ್ವೇಶಾರ್ಪಣಮಸ್ತು ಮಹಾಪ್ರಭು ಮಧ್ವೇಶಾರ್ಪಣಮಸ್ತು

ಮಧ್ವೇಶಾರ್ಪಣಮಸ್ತು ಮಹಾಪ್ರಭು ಮಧ್ವೇಶಾರ್ಪಣಮಸ್ತು।।ಪ।। ಎದ್ದು ಕೂತು ಮಲಗೆದ್ದು ಮಾಡುವ ಕರ್ಮ ಮಧ್ವೇಶಾರ್ಪಣಮಸ್ತು।।ಅ.ಪ.।। ಹುಟ್ಟಿದಾರಭ್ಯದಿ ಅಷ್ಟು ಮಾಡಿದ ಕರ್ಮ ಮಧ್ವೇಶಾರ್ಪಣಮಸ್ತು। ದುಷ್ಟರಾಡುತಿಹ ಕೆಟ್ಟ ನುಡಿಗಳು ಮಧ್ವೇಶಾರ್ಪಣಮಸ್ತು। ಮೆಟ್ಟಿ ಹೆಜ್ಜೆ ಇಟ್ಟದಾಡುವುದು ಮಧ್ವೇಶಾರ್ಪಣಮಸ್ತು। ಶಿಟ್ಟಿಲಿ ಜನರಿಗೆ ನಿಷ್ಟುರಾಡುವುದು ಮಧ್ವೇಶಾರ್ಪಣ ಮಸ್ತು।।1।। ಬಾಲೇರ ಕೂಡಿ ವಿಲಾಸದ ಮಾತುಗಳು ಮಧ್ವೇಶಾರ್ಪಣ ಮಸ್ತು। ಕಾಲಕಾಲದಿ ನಾಲಿಗೆ ರುಚಿಸುವುದು ಮಧ್ವೇಶಾರ್ಪಣಮಸ್ತು। ಬಾಲಕರುಗಳನು ಲಾಲನೆಮಾಳ್ಪದು ಮಧ್ವೇಶಾರ್ಪಣಮಸ್ತು। ಶ್ರೀ ಲಕುಮಿಪತಿಯ ಓಲಗ ಮಾಳ್ಪದು ಮಧ್ವೇಶಾರ್ಪಣಮಸ್ತು।।2।। ನಾಸಿಕದಿಂದಲಿ ಶ್ವಾಸ ಬಿಡುವುದು ಮಧ್ವೇಶಾರ್ಪಣಮಸ್ತು। ಬ್ಯಾಸರದಿಂದಲಿ ಕ್ಲೇಶ ಬಿಡುವುದು ಮಧ್ವೇಶಾರ್ಪಣಮಸ್ತು। ಲೇಸು ದೋರಿ ಬಹು ತೋಷಪಡುವುದು ಮಧ್ವೇಶಾರ್ಪಣಮಸ್ತು। ಬ್ಯಾಸರದಿಂದಲಿ ಕೈ ಬಿಡುವುದು ಮಧ್ವೇಶಾರ್ಪಣ ಮಸ್ತು। ಹೇಸಿಕೆ ವಿಷಯಗಳಾಶೆ ಮಾಡುವುದು ಮಧ್ವೇಶಾರ್ಪಣಮಸ್ತು।।3।। ಬಗೆ ಬಗೆ ವಸ್ತ್ರಗಳಲ್ಲದೆ ಹೊದಿವುದು ಮಧ್ವೇಶಾರ್ಪಣಮಸ್ತು। ಝುಗಝುಗಿಸುವ ಹೊಸ ನಗಗಳ ನಿಡುವುದು ಮಧ್ವೇಶಾರ್ಪಣಮಸ್ತು। ಸೊಗಸಿಂದುತ್ತರಗಳ ಸೇವಿಸುವುದು ಮಧ್ವೇಶಾರ್ಪಣ ಮಸ್ತು। ಹಗಲಿರುಳಲಿ ಮಾಳ್ಪಗಣಿತ ಕರ್ಮವು ಮಧ್ವೇಶಾರ್ಪಣಮಸ್ತು।।4।। ರಮಣಿಯ ರಿಂದಲಿ ರಮಣ ಮಾಡುವುದು ಮಧ್ವೇಶಾರ್ಪಣ ಮಸ್ತು। ಕ್ರಮದಿಂ ದಶೇಂದ್ರಿಯ ಕರ್ಮಗ ಳೆಲ್ಲವು ಮಧ್ವೇಶಾರ್ಪಣಮಸ್ತು। ಭ್ರಮಿಸಿ ಗುರುಗಳ ಮನ ಸ್ತೋಷಿಸುವುದು ಮಧ್ವೇಶಾರ್ಪಣ ಮಸ್ತು। ರಮಾಪತಿ ವಿಠಲನ ಮನದಿ ಧ್ಯಾನಿಸುವುದು ಮಧ್ವೇಶಾರ್ಪಣಮಸ್ತು।।5।।

## ಮಂಗಳಂ ಪ್ರಧಾನ ಮಾರುತಿಗೆ

ಮಂಗಳಂ ಪ್ರಧಾನ ಮಾರುತಿಗೆ।।ಪ।।ಮಂಗಳಂ ಪಾವನ ಮೂರುತಿಗೆ। ಮಂಗಳಂ ತ್ರಿವಿಧ ಸತ್ಕೀರ್ತಿಗೆ। ಮಂಗಳಂ ಸದ್ಗುಣ ಕೀರ್ತಿಗೆ।।ಅ.ಪ।। ಮುಕ್ಕೋಟಿ ರೂಪನಿಗೆ ರುಗ್ಮ ಮಣಿ ಹಾರನಿಗೆ। ಚಿಕ್ಕವನಾಗಿ ಪುರಪೊಕ್ಕವಗೆ।। ಸಿಕ್ಕಿ

ವೈರಿಯ ಕೈಗೆ ರಕ್ಕಸರ ಎದೆಯಲ್ಲಿ। ಸಿಕ್ಕಿಸಿ ದರಣದ ವಿಷ ಭೋಕ್ತನಿಗೆ।।1।। ವೃಕೋದರ ಭೀಮಗೆ ವಿಶೋಕಗೊಡೆಯಗೆ। ಬಕಜರಾಸಂಧ ಕೀಚಕವಧೆ ಮಾಡಿದಗೆ। ಸಕಲದಳದೊಳಗೆ ನಾಯಕನೇ ನೀನೇಕಲಿ। ಬಂಧಕ ಶಂಖಿತಿಗೆದ್ದ ತಾರಕ ಚರಿತಗೆ।।2।। ಒಂದೆ ಅಕ್ಷರದಿಂದಾನಂದ ಕೊಡುವವನಿಗೆ। ಒಂದೆರಡು ಮೂರಾರು ಮುರಿದ ವಗೆ।। ಒಂದೆ ದೈವ ನಮ್ಮ ವಿಜಯವಿಠ್ಠಲ ಕೃಷ್ಣನ್ನ। ವಂದಿಸುವ ಶ್ರೀಮದಾನಂದತೀರ್ಥ ಗೆ ।।3।।



## ದಾಸರು ಮತ್ತು ಯತಿ ಸ್ತುತಿ

### ಏಳು ವಾಸುದೇವ ಏಳು ನಾರಾಯಣನೆ (ಉದಯರಾಗ)

ಏಳು ವಾಸುದೇವ। ಏಳು ನಾರಾಯಣನೆ। ಏಳು ವಾಸುದೇವ। ಏಳು ಕೃಷ್ಣಾಚ್ಯುತನೆ। ಏಳು ಹೇ ಮಾಧವಾ।।ಪ।। ಏಳು ವೈಕುಂಠನೇ। ಏಳು ಕಾರುಣ್ಯನೇ। ಏಳು ಲಕ್ಷ್ಮೀಶನೇ। ಏಳು ಭಗವಂತನಮಿಪೇ।।1।। ಏಳು ಮದ್ವೇಶನೇ। ಏಳು ಪ್ರಾಣೇಶನೇ। ಏಳು ರುದ್ರೇಶನೇ ಏಳಾಂಬಿಂಕೇಶಾ।।2।। ಏಳು ಇಂದ್ರೇಶನೇ। ಏಳು ಶಚಿಗೀಶನೇ। ಏಳು ವಿಪ್ರೇಕಭ ಏಳುಕೇಶವನೇ ಗೋಪತೇ।।3।। ಏಳು ಶಾಸ್ತ್ರ ಪ್ರಿಯನೇ। ಏಳು ಹೇ ಋತ್ರಿಯನೇ। ಏಳು ಯಜ್ಞಪ್ರಿಯನೇ ಏಳು ಕಾರುಣಿಕ ಮೂರ್ತೇ।।4।। ಏಳು ಸಾಮತ್ರಿಯನೇ। ಸರ್ವಕಾರುಣ ಮೂರ್ತೇ। ಏಳು ವೇದಾರ್ಥಪ್ರಿಯ। ಸರ್ವದಾ ಇಹನೇ।।5।। ಏಳು ಗದ್ಯ ಪ್ರಿಯನೆ। ಪುರಾಣ ಪುರುಷನೇ। ಏಳುಸ್ತೋತ್ರಪ್ರಿಯನೆ। ಸರ್ವದಾ ವಿಶ್ವಮೂರ್ತಿ।।6।। ಏಳು ಗುರು ಹೃದಯನೇ। ಪವನಾಂತರಾತ್ಮನೇ। ಏಳು ಗುರು ಗೋವಿಂದ ವಿಠ್ಠಲಹಯವದನ।।7।।

### ಶ್ರೀವತ್ಸಾಂಕಂ ಮಹೋರಸ್ಕಂ

ಶ್ರೀವತ್ಸಾಂಕಂ ಮಹೋರಸ್ಕಂ ವರಮಾಲಾ ವಿರಾಜಿತಂ। ಶಂಖ ಚಕ್ರಧರಾದೇವಂ ಕೃಷ್ಣಂ ವಂದೇ ಜಗದ್ಗುರು।।

### ಗುರುಭಕ್ತಿ ಪ್ರಧಾನ ಸಾಧನವೊ ನಿತ್ಯ

ಗುರುಭಕ್ತಿ ಪ್ರಧಾನ ಸಾಧನವೊ ನಿತ್ಯ। ಗುರು ಶುಶ್ರೂಷಕೆ ಮಹಾಕರ್ಮ ನಾಶವು। ಗುರು ಉಪದೇಶವೇ ಸುಜ್ಞಾನಮಾರ್ಗವು।।ಪ।। ಗುರುಪ್ರಸಾದವೇ ಅಂಗ ಭಂಗಕ್ಕೆ ಕಾರಣ। ಗುರು ಪರಮಾನುಗ್ರಹ ಮಾಡಿದೆಡೆ ನಿರುತ।। ಪರತತ್ತ್ವಪ್ರಮೇಯ ಕರತಳದೊಳಗಿದ್ದ। ತೆರದಿ ಅರುಹು ಆಗುವುದು ಮಾನವರಿಗೆ। ಸ್ವರೂಪ ಯೋಗ್ಯತೆ ದಾನವಿತ್ತು ಪಾಲಿಪುದು।।1।। ಗುರುಭಕುತಿ ಗುರುಬಲ ಒಂದೆ ಇದ್ದರೆ। ಧರೆಯಲ್ಲಿ ಗೆಲುವೆ ಆಗುವುದು। ಗುರುಕರುಣ ಪಡೆದಡೆ ಧನ್ಯನೋ ಧನ್ಯನೋ। ಗುರುಧ್ಯಾನ ಮಾಳ್ಪುದು ಜನರು ಮನದೊಳು ಸದಾ। ಗುರುಚರಣಾಬ್ಜಭೃಂಗನಾಗೊ ನಿರಂತರ। ಗುರುಗಳಿಗೆ ಸಮಾನಗಾಣೆನೊ ಜಗದೊಳು।।2।। ಗುರುವೊಲಿದೆಡೆ ಸರ್ವವಿದ್ಯವು ಪ್ರಾಪ್ತಿ। ಗುರುಮಂತ್ರ ಗುರುಜಪ ಗುರುನಾಮಸ್ಮರಣೆ। ಹಿರಿದಾಗಿ ಕೈಕೊಂಡು ಸುಖಿಸಿರೊ ಸುರಜನರು। ಗುರುಭವಾಬ್ದಿ ದಾಟಿಪ ಸಿರಿವಿಜಯವಿಠಲರಾಯ। ಗುರು ಇಲ್ಲದವರಿಗೆ ಒಲಿಯನು ಕಾಣಿರೋ।।3।।

### ತರಳ ಏಕಲವ್ಯ ಏಕಾಂತದಲೊಂದು

ತರಳ ಏಕಲವ್ಯ ಏಕಾಂತದಲೊಂದು। ಗುರುಪ್ರತಿಮೆಯನ್ನು ನಿರ್ಮಾಣಮಾಡಿ। ನಿರುತ ಭಕುತಿಯಿಂದ ಮಹಾ ಶಾಸ್ತ್ರಾಸ್ತ್ರ ವಿದ್ಯ। ಹರುಷೋನ್ನತದಿಂದ ಸಂಪಾದಿಸಿಕೊಂಡ।।1।। ಗುರುಭಕುತಿಯಿದ್ದ ಮನುಜಗಾವಲ್ಲಿಗೆ। ಸ್ಮರಿಸಿ ಬೇಡಿದ ವಿದ್ಯ ಫಲಿಸುವದೊ ಮರುಳೇ। ತರಳನಾದರು ಕೇಳು ಮಾಡಿದ ವಿಶ್ವಾಸ। ಬರಿದೆಯಾಗದು ಕಾಣೋ ಮುಕ್ತಿವಂತರಿಗರಿದೆ। ವರಮೂರುತಿ ನಮ್ಮ ವಿಜಯವಿಠ್ಠಲರಾಯ। ಗುರುದ್ವಾರದಿಂದ ಪೊರೆವ ಪಾಪ ಕಳೆವ।।2।।

### ಗುಣಾತೀತ ಸದ್ಗುರು ಗಣನಾಥ

ಗುಣಾತೀತ ಸದ್ಗುರು ಗಣನಾಥ। ಘನಸುಖದಾಯಕ ಸದೋದಿತ॥ಪ॥ ಅನುದಿನ ಮಾಡುವೆ ಮನೋಹರ। ಅಣುರೇಣುದೊಳು ನೀ ಸಾಕ್ಷಾತ್ಕಾರ। ಮುನಿಜನರಿಗಾಗುವಿ ಸಹಕಾರ। ಅಣುರೇಣುದೊಳು ನೀ ಸಾಕ್ಷಾತ್ಕಾರ। ಮುನಿಜನರಿಗಾಗುವಿ ಸಹಕಾರ। ನೀನುಹುದೋಭಕ್ತರ ವಿಘ್ನಹರ॥1॥ ನಿಮ್ಮ ಬೋಧಗುಣವೆ ಸರಸ್ವತಿ। ಸಮ್ಯಜ್ಞಾನ ಬೀರುವ ನಿಜಸ್ಥಿತಿ। ಬ್ರಹ್ಮಾದಿಗಳೊಂದಿತ ನಿಜಖ್ಯಾತಿ। ಬ್ರಹ್ಮಾನಂದ ದೋರುವ ಫಲಶ್ರುತಿ॥2॥ ಬೇಡಿಕೊಂಬೆ ನಿಮಗೆ ಅನುದಿನ। ಕೊಡುವವರಿಗೆ ನೀ ನಿಧಾನ। ಮೂಢ ಮಹಿಪತಿ ಒಡೆಯ ನೀ ಪೂರ್ಣ ಮಾಡುತಿಹ ನಿತ್ಯವು ನಾ ನಮನ॥3॥

### ನೀನೆ ವರಗುರು ಮುಖ್ಯಪ್ರಾಣ

ನೀನೆ ವರಗುರು ಮುಖ್ಯಪ್ರಾಣ। ನಿರಂತರವು ನಂಬಿದೆನೊ ನಿಖಿಳಗುಣ ಪೂರ್ಣ॥ಪ॥ ಜಾಣೆ ಕೋಮಲ ಭಾರತೀಶ ಸಕಲ। ಪ್ರಾಣಿಗಳ ಹೃದಯಾಬ್ಜ ವಾಸ ಸುರೇಶ॥ಅ.ಪ॥ ವಾಯು ಸುತನಾಗಿ ರಘುನಾಥಪ್ರಿಯ ದೂತ ಬಲು। ಯೂಥ ಲಂಕೆಯ ಪೊಕ್ಕು ಖ್ಯಾತಿಯನು ಪಡೆದೆ ॥ ಸೀತೆಗುಂಗುರವಿತ್ತು ವೀತಿಹೊತ್ರಗೆ ಪುರವ। ಪ್ರೀತೆನಿಸಿದಾತ ದಿತಿಜಾತರಿಗೆ ಭೀತಿಕರ ॥1॥ ಲಂಡ ಕೀಚಕ ಬಕರ ಮಂಡೆಯನು ಒಡೆದು ಉ। ದ್ದಂಡ ಮಗದಾಧಿಪನ ದಂಡವನು ಸೀಳಿ॥ಭಂಡ ಕೌರವನ ಶಿರ ಚೆಂಡಾಡಿ ಪ್ರಬಲ ರಣ। ಮಂಡಲದಿ ಚಂಡರಿಪು ದಂಡೆಗಳ ಖಂಡಿಸಿದೆ॥2॥ ಸಾಗರದಲಿ ಮದ್ವಮತದಂಗವನು ಏರ್ಪಡಿಸಿ। ಕಂಗೆಟ್ಟು ಕುಮತ ದುಸ್ಸಂಗಗಳ ನಳಿದು। ಗಂಗೆಪಿತ ಕೃಷ್ಣ ಪದಭೃಂಗ ಮೂಜ್ಜಗದೊಳಗೆ। ತುಂಗಭವಭಂಗ ದಯಾಪಾಂಗ ಯತಿಪುಂಗವನೆ॥3॥

### ಗುರುರಾಯರ ನಂಬಿರೋ

ರಾಗ: ಕಲ್ಯಾಣಿ–ಅಟ್ಟತಾಳ

ಗುರುರಾಯರ ನಂಬಿರೋ ಮಾರುತಿ ಎಂಬ-ಗುರುರಾಯರ ನಂಬಿರೋ॥ಪ॥ ಗುರುರಾಯರ ನಂಬಿ ಆವಾಗಲು-ದುರಿತವ ಕಳೆದು ಸದ್ಗತಿಯ ಪಡೆವವರೆಲ್ಲ॥ಅ.ಪ.॥ ವನಧಿಯ ಮನವೇಗದಿ ಲಂಘಿಸಿ ಮಹಿ-ತನುಜೆಶೋಕವ ತರಿದು ವನವ ಬೇರೊಡನೆ ಕಿತ್ತೀಡಾಡಿ ಎದುರಾದ-ದನುಜರ ಸದೆದು ಲಂಕೆಯ ತನ್ನ ಸಖಗಿತ್ತ॥1॥ ಕೌರವ ಬಕ ಹಿಡಿಂಬ ಕೀಚಕರೆಂಬ-ದುರುಳಸಂತತಿ ನೆಗ್ಗೊತ್ತಿ ಘೋರಪಾತಕಿದುಶ್ಶಾಸನ ರಕುತವ-ಹೀರಿ ಮುದದಿ ಮುರವೈರಿಯ ಭಜಿಸಿದ॥2॥ ಜೀವೇಶರೊಂದೆಂಬುವ ದುರ್ವಾದಿಯ-ಭಾವಶಾಸ್ತ್ರಗಳೋಡಿಸಿ। ಗೋವಿದರಿಗೆ ಸದ್ಭಾಷ್ಯವ ತೋರಿದ-ದೇವಪುರಂದರವಿಠಲ ಸೇವಕರಾದ॥3॥

### ಬಂದೆ ಗುರುರಾಯ

ಬಂದೆ ಗುರುರಾಯ ನಿಮ್ಮ। ಸಂದರುಶನಂಗಳ ಬಯಸಿ॥ಪ॥ ರಾಮ ದೂತನಾಗಿ ತ್ರಿಜಗದೊಳಗೆ ಮೇಲಾಗಿಪೋಗಿ। ಕಾಮಿನಿ ಮಣಿಗೆ ಪ್ರೇಮದುಂಗುರವಿತ್ತೆ॥1॥ ಚಂದ ಕುಲದಲ್ಲೇ ಪುಟ್ಟಿ ಚಂದಕುಮತಿಗಳ ತರಿದು। ಬಂಡಿಲನ್ನವನ್ನುಂಡು ದುರುಳನ ಚೆಂಡಾಡಿದ ಕೇಳಿ॥2॥ ಕಟ್ಟಕಡೆಯಲ್ಲೇ ಪುಟ್ಟಿ ಕೆಟ್ಟ ಮತಗಳ ತರಿದು। ಪುಟ್ಟ ಜಗನ್ನಾಥ ವಿಠಲನ ಕೊಂಡಾಡಿದ ಕೇಳಿ॥3॥

### ಜಯ ಪರಮೇಶ್ವರ ಪರಮ ಭಿಕಾರೀ

ಜಯ ಪರಮೇಶ್ವರ ಪರಮ ಭಿಕಾರೀ। ಕಲ್ಪಮೇರುಗುರು ಯೋಗಾಚಾರೀ॥ ತರುತಲ ಆಲಯ ವಸನ ದಿಶಾಚಯ ಭೀತ ನಿರಾಶ್ರಯ ಭವಭಯಹಾರೀ॥ ಹರಕರುಣಾಕರ ವರದಾಭಯಕರ। ಮದನಮಾನಹರ ಶಿವಶುಭಕಾರೀ॥

### ಮರೆಯದಿರು ಮನವೆ ಮಾಧವನ ನಮ್ಮ

ಮರೆಯದಿರು ಮನವೆ ಮಾಧವನ ನಮ್ಮ। ದುರಿತ ದಾರಿದ್ರ್ಯವನು ಹರಿಸಿ ಹೊರೆವವನ॥ಪ॥ ಆಳರಿತು ಊಳಿಗವ

ಕೊಂಡುಂಡು ದಣಿವಂತೆ। ಮೇಲಾಗಿ ಜೀವವನು ಕೊಡುವ ದೇವನ। ಕಾಲ ಕಾಲಕೆ ಮಾಳ್ಪ ನಡೆತಪ್ಪು ನುಡಿತಪ್ಪು। ಆಲೋಚಿಸದೆ ಕರುಣಿಸುವ ಕರುಣನ॥1॥ ಮೂಢನಾಗಲಿ ಮತಿಯುಳ್ಳ ನರನಾಗಲಿ। ಪಾಡಿದಾಕ್ಷಣ ಭೃತ್ಯನೆಂದು ಒಲಿದು। ಕೂಡಿಕೊಂಬುವ ದೊರೆಗಳಿಲ್ಲ ಹರಿಯಲ್ಲದಾ। ನಾಡಾಡಿ ಬಣಗು ಕಲ್ಲುಗಳ ಬೇಡಿ॥2॥ ಮುನ್ನಾರು ಅನ್ಯದೇವರ ಭಜಿಸಿ ಭವಗೆದ್ದ। ರಿನ್ನಾರು ಹರಿಯೊಲುಮೆಯಲಿ ದಣಿದರು। ನಿನ್ನ ಗುರುಗಳಿಂದರಿತು ನೆರೆನಂಬು ಪ್ರಸನ್ನ ವೆಂಕಟಪತಿಯ ಪಾದವನಜನ॥3॥

## ಮಂಗಳಂ ಆನಂದತೀರ್ಥ ಗುರುರಾಯರಿಗೆ

ಮಂಗಳಂ ಆನಂದತೀರ್ಥ ಗುರುರಾಯರಿಗೆ। ಮಂಗಳಂ ಆನಂದತೀರ್ಥ ಗುರುರಾಯರಿಗೆ॥ ಮಂಗಳಂ ಮಧುರನುಡಿ ಸಂಭಾಷ್ಯಗೆ। ಮಂಗಳಂ ಮೈಥಿಲಿಗೆ ಅಂಗುಲಿಯನಿತ್ತವಗೆ॥ ಮಂಗಳಂ ಜಯವೀರ ಮಧ್ವ ಮುನಿಗೆ॥ ಜಯಮಂಗಳಂ ನಿತ್ಯ ಶುಭಮಂಗಳಂ॥1॥ ಆಂಜನೇಯಗರ್ಭ ಸಂಜಾತ ವಿಖ್ಯಾತನಿಗೆ। ಸಂಜೀವನವ ತಂದ ಹನುಮಂತಗೆ। ಅಂಜದಂತ ಭಯಂಕರ ಕಪಿಗಳಿಗೆ ತೋರಿದಗೆ। ಕಂಜಾಕ್ಷರಾಮನ ಭಜಿಸುವವಗೆ ॥ಜಯಮಂಗಳಂ॥2॥ ದ್ವಾಪರದಿ ಕುಂತಿಯ ಗರ್ಭದಲ್ಲಿ ಜನಿಸುತಲಿ। ಪಾಪಿ ದೈತ್ಯರನೆಲ್ಲ ಸೀಳಿದವಗೆ। ದ್ರೌಪದಿಗೆ ಸೌಗಂಧೀಕುಸುಮವನೆ ತಂದವಗೆ। ಶ್ರೀಪತಿಯ ದಾಸಭೀಮ ಸೇನನಿಗೆ। ಜಯಮಂಗಳಂ॥3॥ ಕಲಿಯುಗದಿ ಶಂಕರನ ದುರ್ಮತವ ಮುರಿದವಗೆ। ಖಳಬೌದ್ಧ ಚಾರ್ವಾಕಮತ ಗೆಲಿದಗೆ। ಒಲಿದು ಸಚ್ಛಾಸ್ತ್ರವನು ಸಾಧುಗಳಿಗೊರೆದವಗೇ। ಸುಲಭಪುರಂದರ ವಿಠಲನ ಮಂತ್ರಿಗೆ। ಜಯಮಂಗಳಂ॥4॥

## ಆ ನಮಿಪೆ ಗುರುಸಂತತಿಗೆ ಸತತ

ಆ ನಮಿಪೆ ಗುರುಸಂತತಿಗೆ ಸತತ। ಜ್ಞಾನಭಕ್ತ್ಯಾದಿಗಳ ಕರುಣಿಸಲಿ ಎನಗೆಂದು॥ಪ॥ ಹಂಸನಾಮಕ ಹರಿ ಬ್ರಹ್ಮಗುರುವರ ಸರೋ। ಜಾಸನ ಪುತ್ರರೆನಿಸಿಕೊಂಬಾ। ಆ ಸನಕ ಸನಂದನ ಕುಮಾರಕರ ಶಿಷ್ಯ ದೂ। ರ್ವಾಸಮುನಿ ಜ್ಞಾನನಿಧಿ ತೀರ್ಥ ಪದಾಬ್ಜಗಳಿಗೆ॥1॥ ಗರುಡವಾಹನ ತೀರ್ಥ ಕೈವಲ್ಯಜ್ಞಾನೇಶ ಪರತೀರ್ಥ ಸತ್ಯ ಪ್ರಜ್ಞ ಪ್ರಜ್ಞಾರಾ। ವರಕುಮಾರಕ ತಪೋರಾಜ ಸಂಯಮಿ ವಿಮಲ। ಕರಕಮಲ ಸಂಜಾತ ಅಚ್ಯುತ ಪ್ರೇಕ್ಷಕರಿಗೆ॥2॥ ಶ್ರೀಮದ್ವವರ ಪದ್ಮನಾಭ ನರಹರಿ ಮುನಿಪ। ಶ್ರೀ ಮಾಧವಕ್ಷೋಭ್ಯಯತಿ ಜಯಾರ್ಯ। ಧೀಮಂತ ವಿದ್ಯಾಧಿರಾಜ  ಸುಕವೀಂದ್ರ ನಿಸ್ಸೀಮ ವಾಗೀಶಯತಿ ರಾಮ ಚಂದ್ರಾರ್ಯ ವಿದ್ಯಾನಿಧಿ ರಘುನಾಥ। ರಘುವರ್ಯೋತ್ತಮ ಕರರಿಗೆ॥3॥ ಪದ್ಮ ಸಂಜಾತ ವೇದವ್ಯಾಸರಾ। ವಿದ್ಯಾಪತಿ ಅಧೀಶನಿಧಿ ಸತ್ಯವ್ರತ ನಿಧಿಯಾ। ಶುದ್ಧಾತ್ಮ ಸತ್ಯನಾಥರ ಪಾದ ಕಮಲಗಳಿಗೆ॥4॥ ಸತ್ಯಾಭಿನವ ಪೂರ್ಣ ಸತ್ಯವಿಜಯ ಪ್ರೀಯಾ। ಸತ್ಯಬೋಧರ ಸತ್ಯಸಂಧವರರಾ। ನಿತ್ಯದಲಿ ನೆನೆದು ಕೃತಕೃತ್ಯನಾಗುವೆ ಬಿಂಬ। ಮೂರ್ತ ಜಗನ್ನಾಥವಿಠಲನ ತೋರಿಸಲೆಂದು॥5॥

## ಸ್ಮರಿಸು ಗುರು ಸಂತತಿಯನು ಮನವೇ

ಸ್ಮರಿಸು ಗುರು ಸಂತತಿಯನು ಮನವೇ॥ಪ॥ ಸ್ಮರಿಸು ಗುರು ಸಂತತಿಯ ಸರ್ವಕಾಲಗಳಲ್ಲಿ। ಪೊರೆವ ಹರಿ ಚತುರವಿಧ ಪುರುಷಾರ್ಥಗಳನಿತ್ತು॥ಅ.ಪ॥ ಪರಮಹಂಸಾಖ್ಯ ಹರಿ ಗುರುತಮನೆನಿಸುತಿಪ್ಪ। ಪರಮೇಷ್ಠಿ ತತ್ಸುತರು ಸನಕಾದ್ಯರಾ। ಕರಕಮಲ ಸಂಜಾತ ಕೂರ್ಮಾಸ ಜ್ಞಾನನಿಧಿ। ಗರುಡವಾಹನ ತೀರ್ಥಕೈವಲ್ಯ ಯತಿವರರ॥1॥ ಜ್ಞಾನೇಶ ಪರತೀರ್ಥ ಸತ್ಯ ಪ್ರಜ್ಞ ಪ್ರಾಜ್ಞಾ। ಸೂನು ಸುತಪೋರಾಜ ವರಕುಮಾರಾ। ಮೌನಕುಲವರ ಅಚ್ಯುತ ಪ್ರೇಕ್ಷರಂಘ್ರಿಗಳ। ಆ ನಮಿಪೆನನವರತ ಭಕ್ತ ಪೂರ್ವಕದೀ॥2॥ ಅಚ್ಛಿನ್ನ ಭಕ್ತ ಮರುತವತಾರ ಮಧ್ವಮುನಿ। ಪ್ರಚ್ಛಬ್ಜನಾಭ ನರಹರಿ ಮಾಧವಾ। ಸಚ್ಚರಿತ ಅಕ್ಷೋಭ್ಯ ಮುನಿಪ ಪ್ರತಿವಾದಿ ಭೂ। ತೋಚ್ಚಾಟನವಗೈದ ಜಯತೀರ್ಥ ಗುರುವರರ॥3॥ವಿದ್ಯಾಧಿರಾಜ ರಾಜೇಂದ್ರ ಸುತ ಪೋನಿಧಿಜ । ಯದ್ವಜರ ಪುರುಷೋತ್ತಮ ಬ್ರಹ್ಮಣ್ಯರಾ। ಮಧ್ವಸಿದ್ಧಾಂತ ಸ್ಥಾಪಕ ವ್ಯಾಸರಾಯ ಪ್ರ। ಸಿದ್ಧ ಶ್ರೀನಿವಾಸಯತಿಗಳ ಪವಿತ್ರ ಪದ॥4॥ ಲಕ್ಷ್ಮೀ ಕಾಂತರನ ಶ್ರೀಪತಿ

ರಾಮಚಂದ್ರರನ। ಲಕ್ಷೀ ವಲ್ಲಭ ಲಕ್ಷ್ಮೀ ನಾಥಪತಿಯಾ। ಲಕ್ಷ್ಮೀನಾರಾಯಣರ ಶ್ರೀ ರಘುನಾಥ ಸು। ಭಿಕ್ಷುಗಳ ಜಗನ್ನಾಥ ಗುರುಗಳನಾ॥5॥ ಸಾನುರಾಗದಲಿ ಸರ್ವೋತ್ತಮನ ಮೂರ್ತಿ ವಿ। ಜ್ಞಾನ ಪೂರ್ವಕ ಭಜಿಸಿ ಸುಖಿಸುತಿಪ್ಪಾ। ಶ್ರೀನಾಥ ಗುರುವರರ ಕರಕಮಲಜಾತ ವಿ। ದ್ಯಾನಾಥ ಯತಿಗಳನು ಅನುದಿನದಿ ಮರೆಯದಲೆ॥6॥ ವಿದ್ಯಾಧಿರಾಜರ ಕವೀಂದ್ರ ವಾಗೀಶರ ಸ್ವ। ಸಿದ್ಧಾಂತ ಸ್ಥಾಪಿಸಿದ ರಾಮ ಚಂದ್ರಾ। ಅದ್ವೈಥ ಕುಮದ ದಿನಪ ವಿಬುದೇಂದ್ರಾರ್ಯ। ಶದ್ವೈಷ್ಣವಾಗ್ರಣಿ ಜಿತಾಮಿತ್ರ ಮುನಿವರರ॥7॥ ರಘನಂದನ ಸುರೇಂದ್ರ ವಿಜಯೀಂದ್ರ ಸುಧೀಂದ್ರ। ಸುಗುಣ ವಾರಿಧಿ ರಾಘವೇಂದ್ರಾರ್ಯರಾ। ನಿಗಮಾರ್ಥ ಕೋವಿದ ಸುಯೋಗಿಂದ್ರ ಸೂರೀಂದ್ರ। ಜಗತೀತಳದಿ ಪ್ರಸಿದ್ಧ ಸುಮತೀಂದ್ರರ॥8॥ ಸಾಧುಜನಸನ್ನುತಯ ಉಪೇಂದ್ರರಾಯರ ವೇದ। ವೇದಾಂಗ ಚತುರ ವಾದೀಂದ್ರ ಯತಿಯಾ। ಭೇದಮತ ವಾರಿನಿಧಿ ಚಂದ್ರ ವಸುಧೇಂದ್ರ ವಿ। ದ್ಯಾದಾನಾಸಕ್ತ ವರದೇಂದ್ರ ಯತಿವರರ॥9॥ ರಾಮವೇದ ವ್ಯಾಸ ರಂಘ್ರಿ ಕಮಲಗಳ ಹೃ। ತಾಮರಸದೊಳು ಪೂಜಿಸಿದ ಬಗೆಯನ್ನು।

## ಶ್ರೀ ಜಗನ್ನಾಥದಾಸರು

### ಗುರು ಜಗನ್ನಾಥಾರ್ಯ ಕರುಣಿಸಯ್ಯ

ಗುರು ಜಗನ್ನಾಥಾರ್ಯ ಕುರಣಿಸಯ್ಯ। ಮೊರೆಹೊಕ್ಕೆ ತ್ವತ್ಪದಕೆ ಮರೆಯದಲೆ ಪಿಡಿಕೈಯ॥ಪ॥ ಪ್ರಹ್ಲಾದಾಯನುಗ್ರಹವು ಎಲ್ಲ ಕಾಲದಲಿ। ನನ್ನಲ್ಲಿ ಸಂಪೂರ್ಣವಾಗಿರುವದೆಂಬ। ಸೊಲ್ಲು ಲಾಲಿಸಿ ನಿನ್ನ ಪಲ್ಲವಾಂಘ್ರಿಗೆ ನಮಿಪೆ। ಬಲ್ಲಿದನೆ ಹರಧ್ಯಾನದಲ್ಲಿ ನಿಲ್ಲಿಸು ಮನವ॥1॥ ಜನಕಾಗ್ರ ಜಾತಾರ್ಯ ನೆನಿಸಿ ಜನಿಸುತ ಮಂತ್ರ। ಮನಿನಿಲಯಮುನಿ ವರ್ಯಶ್ರೀರಾಯರ। ಗುಣಸ್ತವನ ವಿರಚಿಸುತ ಪ್ರಣತರಿಗೆ ಬೋಧಿಸುತ। ಮನದ್ದಿಷ್ಟಿ ಪಡೆವುದಕೆ ಅನುಕೂಲಿಸಿದ ಜ್ಞಾನಿ॥2॥ ಶ್ರೀಶ್ಯಾಮಸುಂದರನ ದಾಸವರ್ಯರ ಉಪ। ದೇಶವನು ಕೊಂಡು ಉಪಾಸನೆಯನು। ಲೇಸಾಗಿ ಬಿಡದೆ ಪ್ರತಿವಾಸರದಿ ಗೈದಂಥ। ಭೂಸುರಾಗ್ರಣಿಯಾದ ಕೋಶಿಗಿಯ ವಾಸ॥3॥

### ಮಾನವೀ ನಿಲಯನಿಗಾನಮಿಸುವೆ

ಮಾನವೀ ನಿಲಯನಿಗಾನಮಿಸುವೆ ನಿರತ ಮಾನಿತ ಚರಿತ॥ಪ॥ ಜ್ಞಾನಭಕ್ತಿ ಸಂತಾನ ಖಲಿತ ಹರಿ। ಗಾನ ಸುಧಾ ರಸಪಾನ ಪ್ರದಾತಾ॥ಅ.ಪ॥ ವಾತ ಸಮಯ ಖದ್ಯೋತ ವನಜ ಪ್ರ-।ಖ್ಯಾತ ರವಿಜಸೂತಾ। ನೂತನಾ ಶುಖವಿಜಾತಾ ರೂಪಾಶಯ। ಭೂತ ಭವ್ಯ ಚೇತ। ಪಾತಕ ಹರಹರಿಗಾಥಾಮೃತ ನಿ-।ರ್ಮಾತ ನಿರುಪಮಿತನಾಥ ಜನಾಪ್ತಾ॥1॥. ಘೋರ ಭವ ವನದಿ ತಾರಣ ವಘ ಪರಿ। ನಾರದಮುನಿಯೊರೆದ। ವೀರ ವೈಷ್ಣವ ವಿಚಾರ ಸಾರ ವ್ಯವಹಾರದೊಳಗೆ ಮೆರೆದ। ಸಾರಿಭಜಿಪರುದ್ಧಾರ್ದಗೈವ॥2॥ ದಾಸವರ್ಯ ಮಧ್ವಾಶಯ ವಿದಹ್ಯ-। ದ್ದೇಶದೊಳಗೆ ಹರಿಯಾ। ಸೂಸಿಕಾಂಬ ಸದ್ ವ್ಯಾಸಂಗದ ಚಿ-।ದ್ದೇಶಿಯರಿವ ಪರಿಯ। ಘೋಷಿಸಿ ಕವನವ ರಾಶಿಯೊಳ್ತಂದೆ ವೆಂಕಟೇಶ ವಿಠ್ಠಲನ ವಿಲಾಸದಿ ಮೆರೆಸಿದ॥3॥

### ತೂಗಿರೆ ಶ್ರೀರಂಗ ಒಲಿದ ದಾಸಾರ್ಯರ — ರಾಗ: ಅಭೇರಿ

ತೂಗಿರೆ ಶ್ರೀರಂಗ ಒಲಿದ ದಾಸಾರ್ಯರ। ತೂಗಿರೆ ಜಗನ್ನಾಥ ರಾಯರ। ತೂಗಿರೆ ಭಾಗಣ್ಣ ಗುರುವನುಗ್ರಹಪಾತ್ರ। ಭಾಗವತ್ತೋತ್ತಮರ ತೂಗಿರೆ॥ಪ॥ ಘನಜ್ಞಾನ ಸದ್ಭಕುತಿ ಗುಣದಿ ಬಂಧಿತವಾದ। ಅಖಿಲಮತವೆಂಬ ತೊಟ್ಟಿಲಲಿ। ವನಜನಾಭನ ಧ್ಯಾನ ಯೋಗನಿದ್ರೆಯಮಾಳ್ಪ। ಕನಕ ಶಯ್ಯಾತ್ಮಜರ ತೂಗಿರೆ॥1॥ ಯುದ್ಧದಿ ಸಾರಥಿ ಪದ್ಮಿತ್ರಜಗಾದ। ಮದ್ರಾದೇಶಾಧಿಪರ ತೂಗಿರೆ॥ ವೃದ್ಧಾಶ್ರವಾರ್ಯರ ಸನ್ನಿಧಿ ಶಿಶುವಾಗಿ। ಉದ್ಭವಿಸಿದವರ ತೂಗಿರೆ॥2॥ ಶ್ರೀಶಾಮ ಸುಂದರ ಧಾಮಾ ಪದಾರ್ಹರ। ಪ್ರೇಮ ಪಡೆದವರ ತೂಗೀರೆ॥ ಶ್ರೀಮನ್ ಮಾನಸಿಯಲ್ಲಿ ನೇಮದಿಭಜಿಪರ। ಕಾಮಿತ ಕೊಡುವವರ ತೂಗಿರೆ॥3॥

## ಶ್ರೀ ಗೋಪಾಲದಾಸರು

### ಗೋಪಾಲ ದಾಸರಾಯ

ಗೋಪಾಲ ದಾಸರಾಯ ಮಾಂ ಪಾಲಯ ಗೋಪಾಲ ದಾಸರಾಯ ಗೋಪಾಲ ದಾಸರಾಯ ಅಪಾರ ಮಹಿಮ ಮತ್ತಾಪಗಳೋಡಿಸಿ ಕಾಪಾಡು ಗುರುರಾಯ॥ಪ॥ ಗಜಮುಖ ನಮಿಸುವೆ ಸುಜನ ಪಾಲಕನೆ ವಿಜಯ ದಾಸರಿಗೆ ನಿಜ ಶಿಷ್ಯರೆನಿಸಿದ॥1॥ ಧನ್ವಂತರಿ ಜಪದಿ ಜಗನ್ನಾಥ ದಾಸರ ಬನ್ನವ ಬಿಡಿಸಿದ ಘನ್ನಮಹಿಮ ಗುರು॥2॥ ಏನು ಕರುಣವೋ ಶ್ರೀಮಾನವಿ ದಾಸರಿಗೆ ಸಾನುರಾಗದಿ ಆಯುರ್ದಾನವ ಮಾಡಿದ॥3॥ ಶರಣು ಜನಕೆ ಸುರತರುವನಿಸಿ ಧರೆಯೊಳು ನೆರೆವ ಕಾರ್ಪರ ನರಹರಿಯೆ ಒಲಿಸಿದಂಥ॥4॥

### ಗೋಪಾಲದಾಸರ ದಿವ್ಯ ಚರಣಗಳು

ಗೋಪಾಲದಾಸರ ದಿವ್ಯ ಚರಣಗಳು ಕಾಪಾಡಲೆನ್ನನು ಸತತ॥ಪ॥ ತಾಪಸೋತ್ತಮ ವಿಜಯರಾಯರ ಕೃಪಾ ಜಾಹ್ನವಿ ಪ್ರವಾಹದೊಳು ತೇಲಿ ಶೋಭಿಸುತ್ತಿರುವ॥ಅ.ಪ॥ ಇವರ ಪೂಜೆಯೆ ನಮ್ಮ ವಿಜಯರಾಯರ ಪೂಜೆ। ಇವರ ದಯವೆ ನಮ್ಮ ವಿಜಯರಾಯರ ದಯವು। ಇವರ ಕೊಂಡಾಡುವುದೇ ವಿಜಯರಾಯರ ಸ್ತೋತ್ರ। ಇವರೇ ವಿಜಯರಾಯರ ಮುಖ್ಯ ಪ್ರತಿಮಾ॥1॥ ವೈರಾಗ್ಯಹರಿಭಕ್ತಿ ವಿಜ್ಞಾನಗಳ ಕೊಟ್ಟು ಘೋರದುರಿತ ಗಳೋಡಿಸಿ। ಶ್ರೀರಮಣನ ಪದವ ತೋರುವರು ಬಿಡದೆ। ಈ ಸೂರಿಗಳ ನಂಬಿದವ ಧನ್ಯ ಮಾನ್ಯ॥2॥ ವರದ ಗೋಪಾಲ ಗುರುಗೋಪಾಲ ಶ್ರೀರಂಗ ಒಲಿದ ದಾಸರು। ಈ ಮಹಾಕರುಣಾಳುಗಳ ನಂಬಿ। ಹರಿಭಕುತರೆನಿಸಿದರು ಮರುದೀಶ ಬಾದರಾಯಣಾ ವಿಠಲ ಪ್ರಿಯ॥3॥

### ಗೋಪಾಲದಾಸರಾಯ-ನಿನ್ನಪಾದ

ಗೋಪಾಲದಾಸರಾಯ-ನಿನ್ನಪಾದ ನಾ ಪೊಂದಿದೆನೊ ನಿಶ್ಚಯ ತಾಪತ್ರಯಗಳು ನಾನಾಪರಿಯಿಂದೆನ್ನ ತಾ ಪೀಡಿಸುತಲಿವೆ। ಕಾಪಾಡು ಗುರುರಾಯ॥ಪ॥ ಅಪಮೃತ್ಯುವನು ತರಿದೆ-ಎನ್ನೊಳಗಿಪ್ಪ ಅಪರಾಧಗಳ ಮರೆದೇ। ಚಪಲಚಿತ್ತನಿಗೆ ನೀ ವಿಮಲಮತಿಯನಿತ್ತು ನಿಪುಣನೆಂದೆನಿಸಿದೆ-ಸುಪಿರಿಯರಿಂದಲೀ। ಕೃಪಣವತ್ಸಲ ನಿನ್ನ ಕರುಣೆಗುಪಮೆಗಾಣೆನೋ ಸತತ ಈ ಕಾಶ್ಯಪಿಯೊಳಗೆ ಬುಧರಿಂದ ಜಗದಾಧಿಪನ ಕಿಂಕರನೆನಿಸಿ ಮೆರೆದೇ॥1॥ಘೋರವ್ಯಾಧಿಗಳ ನೋಡೀ-ವಿಜಯರಾಯಾ ಭೂರಿಕರುಣವ ಮಾಡೀ ತೋರಿದರೆನಗೆ ಉದ್ಧಾರಿಕರಿವ ರೆಂದಂದಿನಾರಭ್ಯ ತವಪಾದ ಸಾರಿದೆ ಸಲಹೆಂದು। ಸೂರಿಜನಸಂಪ್ರೀಯ ಸುಗುಣೋದ್ಧಾರ ಮರುಳನ ದೋಷನಿಚಯವ ದೂರಗೈಸು ದಯಾಂಬುನಿಧಿಯೆ ನಿವಾರಿಸದೆ ಕರುಣದೀ ಕೈವಿಡಿದು॥2॥ ಎನ್ನಪಾಲಿಸಿದಂದದೀ-ಸಂತತವು ಪ್ರಪನ್ನರ ಸಲಹೋ ಮೋದೀ ಅನ್ಯರಿಗೀಪರಿ ಬಿನ್ನಪಗೈಯೆ ಜಗನ್ನಾಥವಿಠಲನ ಸನ್ನುತಿಸುವ ಧೀರ ನಿನ್ನ ನಂಬಿದ ಶರಣಗೀ ಪರಿ ಬನ್ನವೇ ಭಕ್ತಾನುಕಂಪಿ ಶರಣ್ಯ ಬಂದೋದಗೀಸಮಯದಿ ಅಹರ್ನಿಶಿ ಧೇನಿಸುವೆ ನಿಮ್ಮನು॥3॥

## ಶ್ರೀ ವಿಜಯದಾಸರು

### ರತುನ ದೊರಕಿತಲ್ಲ ಎನಗೆ ದಿವ್ಯ — ರಾಗ: ಬಿಲಹರಿ-ಅಟ್ಟತಾಳ

ರತುನ ದೊರಕಿತಲ್ಲ ಎನಗೆ ದಿವ್ಯ - ರತುನ ದೊರಕಿತಲ್ಲ॥ಪ॥ ಯತನ ಗೈಯುತ ಬರುತಿರಲು ಪ್ರ-ಯತನವಿಲ್ಲದೆ ವಿಜಯರಾಯರೆಂಬೊ॥ಅ.ಪ.॥ಪಥದಿ ನಾ ಬರುತಿರಲು-ತಳಥಳ ವೆಂದು-ಅತಿಕಾಂತಿ ಝಳಪಿಸಲು-ಬೆರಗಾಗುತ್ತ। ಅತಿಚೋದ್ಯವ ಕಾಣಲು-ಸೇವಿಸುತಿರೆ- ಸತತ ಕರಪಿಡಿದಾದರಿಸಿ ಮನೋ-ರಥವ ಪೂರೈಸುತಲಿ ದಿವ್ಯ ಸನ್ಮತಿಯ ಪಾಲಿಸಿ ಮೋಕ್ಷಸು-ಪಥವ ಅತಿಶಯದಿ ತೋರುತ್ತ ಪೊರೆದ॥1॥ ಜ್ಞಾನವೆಂಬೊ ಪುತ್ಥಳಿ-ಕಂಬಿಯಲ್ಲಿ -ಆಣಿಮುತ್ತಿನ ಭಕ್ತಿಲಿ-ಸುಕೃತಮಾಲಾ। ನಾನಾವಿಧಹವಳದಲಿ ಸೇರಿಸುತಲಿ-ಪ್ರಾಣಪದಕವೆಂಬ ಮಾಲೆಯನು ಅನು ಮಾನವಿಲ್ಲದೆ

ಕೊರಳಿಗ್ಹಾಕುತ ಗಾನದಿಂ-ಕುಣಿಯುತ್ತ ಪಾಡುತ್ತ ದೀನಜನರುದ್ಧಾರಗೈಯುವ ॥2॥ ಶೋಧಿಸಿ ಗ್ರಂಥಗಳ ಸುಳಾದಿಯ ಮೋದದಿಂದಲಿ ಬಹಳ ಕವಿತೆಯ ಮಾಡಿ ಸಾಧು ಜನಕೆ ಸಕಲ ಆನಂದವಿತ್ತು ವಾದಿರಾಜನರನು ಗೆದ್ದು ಬೋಧಿಸಿ ಮಾಧವ ಜಗನ್ನಾಥ ವಿಠ್ಠಲನ ಪಾದ ಕಮಲಕೆ ಮಧುಪನಂದದಿ ಸಾದರದಿ ತೋರುತ್ತ ಮೆರೆಯುವ॥3॥

### ಗುರು ವಿಜಯರಾಯರಂದು ಸಮ್ಮುಖದಲಿ

ಗುರು ವಿಜಯರಾಯರಂದು ಸಮ್ಮುಖದಲಿ ಬಂದು। ಪರಿವ್ಯಾಪ್ತನಾದ ಹರಿಯ ವೀಕ್ಷಿಸಿ। ಪರಿಪರಿ ವಿಧದಿಂದ ಸ್ತುತಿಸಿ ಪ್ರಾಂತ್ಯದಲ್ಲಿ। ಗುರುವಿಜಯವಿಠ್ಠಲನ್ನ ಸೇವಕ ನೀನೆಂದಿ॥1॥ ಕಾರಣದಿಂದ ನಿಮಗೆ ಇದೇ ಮುದ್ರಿಕವು ಎಂಬ। ತೆರವಾದ ಸಜ್ಞವನ್ನು ಸೂಚಿಸಿದಿ। ಪರಮಧನ್ಯನಾದೆ ಗುರುವಿಜಯದಾಸರಿಗೆ। ಚರಣಸೇವಕನಾದೆ ನಿನ್ನ ದಯದಿ॥2॥ ಗುರುಗಳ ದ್ರೋಹದಿಂದ ಮುಕ್ತನಾಗಿ ನಿನ್ನ। ಕುರುಹು ಕಾಣುವ ಅಧಿಕಾರಿಯಾದೆ। ಪರಿಪೂರ್ಣಕೃಪನಿಧೆ ಗುರುವಿಜಯವಿಠ್ಠಲ ನಿನ್ನ। ಕರುಣದ ಫಲವಿದೆ ಬಾಳಿದದಕೆ॥3॥

### ಕರವೊಡ್ಡಿ ಬೇಡುವೆ ಗುರುವಿಜಯೀಂದ್ರ ರಾಗ: ಶಂಕರಾಭರಣ

ಕರವೊಡ್ಡಿ ಬೇಡುವೆ ಗುರುವಿಜಯೀಂದ್ರ। ನೆರೆನಂಬಿದ ಭಕುತನ ಕಾಯೋ ದೊರೆಯೇ॥ಪ॥ ಕರಕರೀ ಭವಸಾಗರದಿ ಮುಳುಗುತಿಹೆ। ಪೊರೆವರಿನ್ನೊಬ್ಬರನರಿಯೇ ಗುರುವೆ॥ಅ.ಪ॥ ಧರಣಿಯೊಳು ಭೂ ಸುರೋತ್ತಮರಲ್ಲಿ ಜನಿಸಿ। ಸಕ್ರಮದಿ ವಿಪ್ರತ್ವ ವಹಿಸಿ। ಗುರುವ್ಯಾಸ ಮುನಿರಾಯರ ಪಾದಕ್ಕೆರಗಿ। ಉರುಮಧ್ವಾಗಮಾರ್ಥವ ಗ್ರಹಿಸಿ। ಮರಳಿ ಎರಡು ನಾಲ್ಕು ಬಾರಿಶಾಸ್ತ್ರಗಳರ್ಥ ಗ್ರಹಿಸಿ। ಧಾರುಣಿಯೊಳು ಚರಿಸಿ ಅರದೂರಮಾಡಿ ಪೊರೆವ ಪ್ರಭು ಸಲಹೆನ್ನ ನಿರುತನಾನೆರಗುವೆ ನಿನ್ನ ಚರಣವಗ್ರಹಿಸಿ॥1॥ ಭಾಗವತಾಗ್ರೇಸರಗುರು ಸುರೇಂದ್ರ ಮುನಿ ಕರ ಪದುಮ ಸಂಜಾತ ಯೋಗಿವರ್ಯರೆ! ನಿಮ್ಮ ಪಾದ ಸೇರಿದ ಜನರಘವ ಕಳೆವ ನಿರ್ಭೀತ। ಭೋಗಿಭೂಷಣನೇ ಪರದೈವವೆಂಬಾ। ದುರ್ವಾದಿಗಳ ಗೆದ್ದ ಖ್ಯಾತ। ರಾಘವೇಂದ್ರರ ಪರಮ ಗುರುವೇ ನಿಮ್ಮಯ ಪಾದ ನೆರೆನಂಬಿಹೆ ನಿಮ್ಮ ದೂತ॥2॥ ಚತುರಧಿಕಶತ ಗ್ರಂಥವಿರಚಿಸಿ ದುರ್ಮತಿ ಲಿಂಗಣ್ಣನ ಗೆದ್ದು ಮಠವ ಚತುರಧಿಕಷಷ್ಠಿ ವಿದ್ಯಾನಿಪುಣನೆ ರತಿಪತಿ ಪಿತಗರ್ಪಿಸುವ ಕ್ಷಿತಿಯೊಳು ಪತಿತಪಾವನ ರಘುಪತಿಯೇ। ಸರ್ವೋತ್ತಮ ನೆಂದು ವಾದಿಸುವ ತತುವೇಶರ ಪತಿಪಿತ ಜಯ ಲಕುಮೀ। ಪತಿನರಸಿಂಹನರ್ಚಿಸುವ॥3॥

### ಸ್ಮರಿಸಿ ಬದುಕಿರೋ ದಿವ್ಯ ಚರಣಕೆರಗಿರೋ (ಶ್ರೀ ವಿಜಯರಾಯರ ಕವಚ)

ಸ್ಮರಿಸಿ ಬುದುಕಿರೋ ದಿವ್ಯ ಚರಣಕೆರಗಿರೋ-ದುರಿತ ತರಿದು ಪೊರೆವ ವಿಜಯಗುರುಗಳೆಂಬರ ॥ಪ॥ ದಾಸರಾಯನಾ ದಯವ ಸೂಸಿಪಡೆದನ-ದೋಷರಹಿತನ ಸಂತೋಷಭರಿತನಾ॥1॥ ಜ್ಞಾನವಂತನಾ ಬಲುನಿದಾನಿ ಶಾಂತನ-ಮಾನ್ಯವಂತನಾ ಮಹವದಾನ್ಯದಾಂತನ॥2॥ ಹರಿಯ ಭಜಿಸುವ ನರಹರಿಯ ಯಜಿಸುವ-ದುರಿತ ತ್ಯಜಿಸುವ ಮನಕೆ ಹರುಷ ಸುರಿಸುವ॥3॥ ಮೋದಭರಿತನ ಪಂಚಭೇದವರಿತನ-ಸಾಧುಚರಿತನ ಮನವಿಷದಮರೆತನ॥4॥ ಇವರ ನಂಬಿದಾ ಜನಕೆ ಭವವಿದೆಂಬುದೂ-ಹವಣವಾಗದೋ ನಮ್ಮವರ ಮತವಿದೂ॥5॥ ಪಾಪಕೋಟಿಯ ರಾಶಿ ಲೇಪವಾಗದೋ-ತಾಪಕಳೆವನೋ ಬಲು ದಯಾಪಯೋನಿಧಿ॥6॥ ಕವನರೂಪದಿ ಹರಿಯ ಸ್ತವನ ಮಾಡಿದ-ಭುವನ ಬೇಡಿದ ಮಾಧವನ ನೋಡಿದಾ॥7॥ ರಂಗನೆಂದನ ಭವವು ಹಿಂಗಿತೆಂದನ-ಮಂಗಳಾಂಗನ ಅಂತರಂಗವರಿತನ॥8॥ ಕಾಶಿನಗರದಲ್ಲಿದ್ದ ವ್ಯಾಸದೇವನಾ ದಯವ-ಸೂಸಿ ಪಡೆದನಾ ಉಲ್ಲಾಸತನದಲೀ॥9॥ ಚಿಂತೆ ಬ್ಯಾಡಿರೋ ನಿಶ್ಚಿಂತ ರಾಗಿರೋ-ಶಾಂತಗುರುಗಳಾ ಪಾದವಾಂತು ನಂಬಿರೋ॥10॥ ಖೇದವಾಗದೋ ನಿಮಗೆ ಮೋದವಾಹುದೋ- ಆದಿದೇವನ ಸುಪ್ರಸಾದವಾಹುದೋ॥11॥ ತಾಪ ತಡೆವನೋ ಬಂದ ಪಾಪ ಕಡಿವನೋ-ಶ್ರೀಪತಿಯ ಪಾದಸಮೀಪವಿಡುವನೋ॥12॥ ಗಂಗೆ ಮಿಂದರೆ ಮಲವು ಹಿಂಗಿತಲ್ಲದೆ- ರಂಗನೊಲಿಯನೋ ಭಕ್ತರ ಸಂಗದೊರೆಯದೇ॥13॥ ವೇದ ಓದಲೂ ಬರಿದೆ ವಾದ

ಮಾಡಲೂ-ಹಾದಿಯಾಗದೋ ಬುಧರ ಪಾದ ನಂಬದೇ॥14॥ ಲೆಕ್ಕವಿಲ್ಲದೆ ದೇಶ ಸುತ್ತಿ ಬಂದರೂ-ದುಃಖವಲ್ಲದೆ ಲೇಶ ಭಕ್ತಿ ದೊರಕದೂ॥15॥ ದಾನ ಮಾಡಲೂ ದಿವ್ಯ ಗಾನ ಪಾಡಲೂ-ಜ್ಞಾನ ದೊರೆಯದೋ ಇವರಧೀನನಾಗದೇ॥16॥ ನಿಷ್ಠೆಯಾತಕೇ ಕಂಡ ಕಷ್ಟವ್ಯಾತಕೇ-ದಿಟ್ಟ ಗುರುಗಳ ಪಾದ ಮುಟ್ಟಿ ಭಜಿಸಿರೋ॥17॥ ಪೂಜೆಮಾಡಲೂ ಕಂಡ ಗೋಜು ಬೀಳಲೂ-ಬೀಜಮಾತಿನ ಫಲ ಸಹಾಯ ದೊರೆಯದೋ॥18॥ ಸುರರು ಎಲ್ಲರೂ ಇವರ ಕರವ ಪಿಡಿವರೂ-ತರಳರಂದದೀ ಹಿಂದೆ ತಿರುಗುತಿಪ್ಪರೂ॥19॥ ಗ್ರಹಗಳೆಲ್ಲವೂ ಇವರ್ಗೆ ಸಹಾಯಮಾಡುತಾ-ಅಹೋರಾತ್ರಿಲಿ ಸುಖವನಿವನು ಕೊಡುವವೋ ॥20॥ ವ್ಯಾಧಿಬಾರದೋ ದೇಹಬಾಧೆ ತಟ್ಟದೋ-ಆದಿದೇವನಾ ಸುಪ್ರಸಾದವಾಹುದೋ॥21॥ ಪತಿತ ಪಾಮರ ಮಂದಮತಿಯು ನಾ ಬಲೂ-ಸ್ತುತಿಸಲಾಪೆನೇ ಇವರ ಅತಿಶಯಂಗಳಾ॥22॥ ಕರುಣದಿಂದಲೀ ಎಮ್ಮ ಪೊರೆವನಲ್ಲದೇ-ದುರಿತ ಕೋಟಿಯ ಬ್ಯಾಗ ತರಿದು ದಯದಲೀ॥23॥ ಮಂದಮತಿಗಳೂ ಇವರ ಚಂದವರಿಯದೇ- ನಿಂದೆಮಾಡಲೂ ಭವದ ಬಂಧ ತಪ್ಪದೋ॥24॥ ಇಂದಿರಾಪತಿ ಇವರ ಮುಂದೆ ಕುಣಿವನೋ-ಅಂದ ವಚನವಾ ನಿಜಕೆ ತಂದು ಕೊಡುವನೋ॥25॥ ಉದಯಕಾಲದೀ ಈ ಪದವ ಪಠಿಸಲೂ-ಮದಡನಾದರೂ ಜ್ಞಾನ ಉದಯ ವಾಹುದೋ॥26॥ ಸಟೆ ಇದಲ್ಲವೋ ವ್ಯಾಸವಿಠಲ ಬಲ್ಲನೋ-ಪಠಿಸ ಬಹುದಿದೂ ಕೇಳಿ ಕುಟಿಲರಹಿತರೂ ॥27॥

## ಶ್ರೀ ಕನಕದಾಸರು

ಕನಕದಾಸರ ಪಾದವನಜ — ರಾಗ: ಧನ್ಯಾಸಿ-ಅಟ್ಟತಾಳ

ಕನಕದಾಸರ ಪಾದವನಜ ಸ್ಮರಿಸುವ। ಮನುಜರೆ ಪರಮ ಧನ್ಯರು॥ಪ॥ ಹನುಮಾಂತರ್ಗತ ಜನಕಜೆರಮಣನ ಘನಜ್ಞಾನ ಭಕುತಿ ಕೊಡುವ-ಭಾವ ಕಡಿವ॥ಅ.ಪ.॥ ಆಶಿಸಿದಾಗೀವೆ ಸೂಸಲಿ ದರ್ಶನ। ದಾಸ ನನಾಗೇಳೆಂದು। ಶ್ರೀಶನೆ ಬೆಂಬತ್ತಿ ದಾಸದೀಕ್ಷೆಯ ಕೊಡಿಸಿ ನೀ ತಾಸೇವೆ ಕೊಂಡವನ ನಿಜ ಜವನ॥1॥ ವ್ಯಾಸರಾಯರು ಪೇಳೆ ಶ್ರೀಶನ್ನ ಕರೆಯಲು। ತಾ ಶ್ವಾನನಾಗಿ ಬಂದ। ಭೂಸುರರು ಹೊಡೆದಟ್ಟೆ ಶೇಷರೂಪದಿ ಕರೆಯೆ। ಆ ಸರ್ಪ ಕಂಡೋಡಿದರು ನಿಜ ಮೂಢರು॥2॥ ಏಕಾಂತದಿ ತಿನಲು ಆ ಕದಳಿಫಲ ಕೊಡೆ। ತಾ ಕೈಲಿ ಹಿಡಿದು ಕುಳಿತ। ಏಕೆನಲು ಸರ್ವತ್ರ ಶ್ರೀಕಾಂತ ತಾ ವ್ಯಾಪ್ತ। ನಾ ಕಾಣೇನೇಕಾಂತ - ಜ್ಞಾನಿ ಸಂತ॥3॥ ಭಕ್ತಿಸಾರವ ಕಥೆ ಪದ್ಯೋಕ್ತಿಗಳ ನುಡಿದು। ಕಿತ್ತೆಸೆದ ಮೂಢ ರೂಢಿ। ಯುಕ್ತವಾದಾನಂದ ರುಕ್ತಿಗಳಿಗನುಸರಿಸಿ। ಭಕ್ತಿಲಿ ಗೋವಿಂದನ-ಭಜಿಸಿ ರೆಂದನ॥4॥ ಹೀನಜನೆಂದುದೇವಸ್ಥಾನದಿಂದಟ್ಟಲು। ಮಾನವಂತ ರನೆ ತೊರೆದ। ಮಾನಿ ವರಗಡದಿ ನ್ನಿಶೇಷ ವಿಠ್ಠಲ ಭಕ್ತಗೆ। ತಾನೊಲಿದು ದರ್ಶನವಿತ್ತ- ಹಿಂದಿರು ಗುತ್ತ॥5॥

## ಶ್ರೀ ಪುರಂದರದಾಸರು

ಗುರುವಿನ ಗುಲಾಮನಾಗುವ — ರಾಗ: ಪಂತುವರಾಳಿ-ಆದಿತಾಳ

ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ॥ಪ॥ ಪರಿಪರಿ ಶಾಸ್ತ್ರವನೇಕವನೋದಿ ವ್ಯರ್ಥವಾಯಿತು ಭುಕುತಿ॥ಅ.ಪ॥ ಆರುಶಾಸ್ತ್ರವನೋದಿದರಿಲ್ಲ। ಮೂರಾರು ಪುರಾಣವ ಮುಗಿಸಿದರಿಲ್ಲ। ಸಾರಿಸಜ್ಜನರ ಸಂಗವ ಮಾಡದೆ। ಧೀರನಾಗಿ ತಾ ಮೆರೆದರೆ ಇಲ್ಲ॥1॥ ಕೊರಳೊಳು ಮಾಲೆಯ ಧರಿಸಿದರಿಲ್ಲ। ಬೆರಳೊಳು ಜಪಮಣಿ ಎಣಿಸಿದರಿಲ್ಲ। ಮರುಳನಂತೆ ಶರೀರಕೆ ಬೂದಿಯ। ಒರಸಿಕೊಂಡು ತಾ ತಿರುಗಿದರಿಲ್ಲ॥2॥ ನಾರಿಯ ಭೋಗ ಅಳಿಸಿದರಿಲ್ಲ। ಶರೀರಕೆ ಸುಖವ ಬಿಡಿಸಿದರಿಲ್ಲ। ನಾರದವರದ ಶ್ರೀ ಪುರಂದರವಿಠಲನ। ಮರೆಯದೆ ಮನದೊಳು ಬೆರೆಯುವ ತನಕ॥3॥

**ವರಗುರು ಉಪದೇಶ** — **ರಾಗ: ಆರಭಿ**

ವರಗುರು ಉಪದೇಶ ನೆರವಾಯಿತೆನಗೀಗ ಇನ್ನೇನಿನ್ನೇನು॥ಪ॥ ಹರಿದಾಸರ ಸಂಗ ದೊರಕಿತು ಎನಗೀಗ

ಇನ್ನೇನಿನ್ನೇನು।।ಅ.ಪ।। ಮಾಯೆಯ ಸಂಸಾರ ಮಮಕಾರ ಹಿಂಗಿತು ಇನ್ನೇನಿನ್ನೇನು।। ತೋಯಜಾಕ್ಷನ ನಾಮ ಜಿಹ್ವೆಯೊಳ್ ನೆಲೆಸಿತು ಇನ್ನೇನಿನ್ನೇನು।।1।। ಹಲವು ದೈವಗಳೆಂಬ ಹಂಬಲುಬಿಟ್ಟಿತು ಇನ್ನೇನಿನ್ನೇನು। ಜಲಜನಾಭನ ನಾಮ ಹೃದಯದೋಳ್ ನೆಲೆಸಿತು ಇನ್ನೇನಿನ್ನೇನು।।2।। ತಂದೆತಾಯಿ ಮುಚುಕುಂದವರದನಾದ ಇನ್ನೇನಿನ್ನೇನು। ಸಂದೇಹವಿಲ್ಲ ಮುಕುಂದ ದಯಮಾಡಿದ ಇನ್ನೇನಿನ್ನೇನು।।3।। ಏನೆಂದು ಪೇಳಲಿ ಆನಂದ ಸಂಭ್ರಮ ಇನ್ನೇನಿನ್ನೇನು। ಆ ನಂದಗೋಪನ ಕಂದನ ಮಹಿಮೆಯ ಇನ್ನೇನಿನ್ನೇನು।।4।। ಕರಿರಾಜವರದನ ಕರುಣ ಸ್ಥಿರವಾಯಿತು ಇನ್ನೇನಿನ್ನೇನು। ನರರ ಪಾಮರರ ಸಂಗತಿಗಳ ಬಿಡಿಸಿತು ಇನ್ನೇನಿನ್ನೇನು।।5।। ಎನ್ನ ವಂಶಗಳೆಲ್ಲ ಪಾವನವಾದವು ಇನ್ನೇನಿನ್ನೇನು। ಚಿನ್ಮಯ ಪುರಂದರ ವಿಠಲಯ್ಯ ದೊರಕಿದ ಮೇಲಿನ್ನೇನಿನ್ನೇನು।।6।।

### ಗುಣವಾಯಿತೆನ್ನ ಭವರೋಗ

ಗುಣವಾಯಿತೆನ್ನ ಭವರೋಗ ಕೃಷ್ಣನೆಂಬ ವೈದ್ಯರು ದೊರಕಿದನು। ಗುಣವಾಗುವವರಿಗೆ ಎಣೆಯಿಲ್ಲ। ಗುಣವಂತರಾಗುವರು ಭವದೆಲ್ಲ।।ಪ।। ಸಂತತ ಹರಿಭಕ್ತಿಯನುಪಾನ। ಸಂತತ ಗುರುಭಕ್ತಿ ಮರುಪಾನ।। ಸಂತತ ಶ್ರವಣ ಕಠಿನ ಪಥ್ಯ। ಸಂತತ ಕೀರ್ತನ ಉಷ್ಣೋದಕ।।1।। ಚಂದ್ರೋದಯ ಉಂಟು ಈತನಲ್ಲಿ। ಚಿಂತಾಮಣಿಯುಂಟು ಈತನಲ್ಲಿ। ಸಂಚಿಯೊಳಗೆ ತುಂಬ ಮಾತ್ರೆಗಳುಂಟು। ಚೆನ್ನಾಗಿ ಗುಣ ಮಾಡುವನೀತ।।2।। ಗುರುಸ್ಮರಣೆಯು ಶುಂಠಿ ಮೆಣಸು। ಹರಿದಿವ್ಯನಾಮವು ಸಾರನ್ನ। ಗುರುಪಾದ ಸೇವೆಯು ಸಿಹಿಸಾರು। ಹರಿಪಾದೋದಕ ವೇಘೃತವು।।3।। ಸಹಸ್ರನಾಮದಿ ತಾ ವಂದ್ಯ। ಸಕಲ ಸ್ವತಂತ್ರಕೆ ತಾ ಬಾಧ್ಯ। ಹರಿಸರ್ವೋತ್ತಮ ನೆಂಬ ವೈದ್ಯ। ಪುರಂದರವಿಠಲನೆ ನಿರವದ್ಯ।।4।।

### ಗುರು ಉಪದೇಶವಿಲ್ಲದ (ಸುಳಾದಿ) ರಾಗ: ರೇವತಿ

ಗುರು ಉಪದೇಶವಿಲ್ಲದ ಜ್ಞಾನವು। ಗುರು ಉಪದೇಶವಿಲ್ಲದ ಕ್ರಿಯೆಗಳು। ಗುರು ಉಪದೇಶವಿಲ್ಲದ ಸ್ನಾನವು। ಗುರು ಉಪದೇಶವಿಲ್ಲದ ಧ್ಯಾನವು। ಗುರು ಉಪದೇಶವಿಲ್ಲದ ಜಪವು। ಗುರು ಉಪದೇಶವಿಲ್ಲದ ತಪವು। ಗುರು ಉಪದೇಶವಿಲ್ಲದ ಮಂತ್ರ। ಗುರು ಉಪದೇಶವಿಲ್ಲದ ತಂತ್ರ।। ಉರಗನ ಉಪವಾಸದಂತೆ ಕಾಣಿರೋ ಗುರು ವ್ಯಾಸರಾಯರೇ। ಕರುಣದಿಂದೆನಗೆ ವರ ಮಹಾಮಂತ್ರಗಳ ಉಪದೇಶಿಸಿದರು। ಪುರಂದರ ವಿಠಲನೆ ಪರನೆಂದರುಹಿ ದುರಿತಭಯವನ್ನೆಲ್ಲ ಪರಿಹರಿಸಿದರು।।

### ಕಂಗಳಿಗೆ ಹಬ್ಬವಾಯಿತಯ್ಯ

ಕಂಗಳಿಗೆ ಹಬ್ಬವಾಯಿತಯ್ಯ।।ಪ।। ಮಂಗಳಾತ್ಮಕ ಪುರಂದರದಾಸರನು ಕಂಡು।।ಅ.ಪ.।। ಸಕಲ ತೀರ್ಥಕ್ಷೇತ್ರ ಯಾತ್ರೆ ಮಾಡಿದ ಫಲವು ಸಕಲ ಸತ್ಕರ್ಮ ಸಾಧಿಸಿದ ಫಲವು। ಭಕುತಿಯಿಂ ಭಾಗೀರಥೀ ಮಜ್ಜನದ ಫಲವು। ರುಕುಮಿಣಿ ಪತಿಯ ಪದ ಭಕುತರನು ಕಂಡು।।1।। ಇವರ ನರರೆಂದವರು ನರಕದಲಿ ಬೀಳುವರು। ಕವಿಜನರು ಒಪ್ಪಿ ಕೈ ಹೊಡೆದು ಹೇಳಿರಲು। ಅವನಿಯೊಳಗತಿ ದುರ್ಲಭವು ನಂದಗೋಪನ್ನ। ಕುವರನಿದ್ದೆಡೆಯೆ ವೈಕುಂಠವೆಂಬುವರ ಕಂಡು।।2।। ಧನ್ಯನಾದೆನು ನಾನು ಮನುಜ ಜನ್ಮದಿ ಪುಟ್ಟಿ। ಮಾನ್ಯನಾದೆನು ಇನ್ನು ಈ ಜಗದೊಳಗೆ। ಪನ್ನಂಗಶಯನ ಶ್ರೀಕೃಷ್ಣ ದಾಸರನು। ಚೆನ್ನಾಗಿ ಸ್ಮರಿಸಿ ಪಾವನ್ನನಾದೆನಿಂದು।।3।।

### ಗುರುಕರುಣ ಹೊಂದುವುದು (ಉಗಾಭೋಗ) ರಾಗ: ಮೋಹನ

ಗುರುಕರುಣ ಹೊಂದುವುದು ಪರಮ ದುರ್ಲಭವಯ್ಯ। ಪರಿಪರಿ ವ್ರತಗಳಾಚರಿಸಲು ಫಲವೇನು। ಶರೀರಾದಿ ಪುತ್ರಮಿತ್ರ ಕಳತ್ರ ಬಾಂಧವರು। ಇರಿಸೋರೆ ಸದ್ಗತಿಗೆ ಸಾಧನದಿ ನಿರತವು। ಗುರುಪಾದ ನಿಜವಾಗಿ ಮನದಲ್ಲರಿತು ಭಜಿಸಲು। ಅಖಿಳ ಸಂಪದವಕ್ಕು ಪುರಂದರ ವಿಠಲ।।

### ಗುರು ಪುರಂದರದಾಸರೆ — ರಾಗ: ಜುಂಜೋಟಿ

ಗುರು ಪುರಂದರದಾಸರೆ ನಿಮ್ಮ ಚರಣ ಸರಸಿಜ ನಂಬಿದೆ।।ಪ।। ಗುರುವರಹಿತನ ಮಾಡಿ ಎನ್ನನು ಪೊರೆವ ಭಾರವು ನಿಮ್ಮದೆ।।ಅಪ।। ಒಂದು ಅರಿಯದ ಮಂದಮತಿ ನಾ ನಿಂದು ನಿಮ್ಮನು ವಂದಿಪೆ। ಇಂದಿರೇಶನ ಪಾದ ತೋರಿಸಿ ತಂದೆ ಮಾಡೆಲೊ ಸತ್ಕೃಪೆ।।1।। ಪುರಂದರಘಢದೊಳಗೆ ನಿಂದು ನಿರುತ ದ್ರವ್ಯವ ಗಳಿಸಿದೆ। ಪರಮ ಪುರುಷನು ವಿಪ್ರನಂದದಿ ಕರವ ನೀಡಿ ಯಾಚಿಸೆ।।2।। ಪರಮ ನಿರ್ಗುಣ ಮನವನರಿತು ಹರಿಗೆ ಸೂರೆಯ ನೀಡುತ। ಅರಿತು ಮನದೊಳು ಜರಿದು ಭವಗಳ ತರುಣಿ ಸಹಿತ ಹೊರ ಹೊರಟನೆ।।3।। ಮಾರಜನಕನ ಸನ್ನಿಧಾನದಿ ಸಾರಗಾನವ ಮಾಡುವ। ನಾರದರೆ ಈ ರೂಪದಿಂದಲಿ ಚಾರುದರುಶನ ತೋರಿದ।।4।। ಅಜಭವಾದಿಗಳರಸನಾದ ವಿಜಯವಿಠಲನ ಧ್ಯಾನಿಪ। ನಿಜ ಸುಜ್ಞಾನವ ಕೊಡಿಸಬೇಕೆಂದು ಭಜಿಪೆನೊ ಕೇಳ್ ಗುರುವರ।।5।।

### ದಾಸಾರಾಜಾ ಪುರಂದರ

ದಾಸಾರಾಜಾ ಪುರಂದರ ದಾಸರಾಜಾ।।ಪ।। ದಾಸರಾಜಾ ಹರಿದಾಸ - ಪೀಠ ಸಂ। ಸ್ಥಾಪಿಸಿ ಪೋಷಿಸಿ ಬೆಳೆಸಿದ ಧೀರಾ।।1।। ವ್ಯಾಸರಾಯರಿಂದ ದಾಸದೀಕ್ಷೆಯನು। ನೀ ಸ್ವೀಕರಿಸಿದ ಭೂಸುರ ವಂದ್ಯಾ।।2।। ಶ್ರೀನಿವಾಸ ನವಕೋಟಿ-ನಾರಾಯಣ। ಜೀನರಲ್ಲಿ ಅತಿಜೀನ ಚೆನಿವಾಲಾ।।3।। ಭೂಸುರ ವೇಷದಿ ದೇಶಾವರೆಗೆ। ಶ್ರೀಶ ಬಂದರೆ ಷಣ್ಮಾಸ ಕಾಡಿದೆ।।4।। ಸಾಪಪೈಸಾಗಳ ರಾಶಿ ಸುರವಿ ನೀ। ಒಂದು ಪೈಸಾ ಆರಿಸಿಕೊ ಎಂದಿ।।5।। ಸೋತು ಶ್ರೀ ಹರಿಯು ನಿನ್ನ ಸತಿಗೆ ಮೊರೆಯಿಡೆ। ಪತಿವ್ರತೆ ಕೊಟ್ಟಳು ರತ್ನದ ಮೂಗುತಿ।।6।। ಭೂಪತಿ ವಿಠ್ಠಲನು ಚಮತ್ಕಾರ ತೋರಿಸಿ। ದಾಕ್ಷಣ ನೀ ಹರಿದಾಸನಾದೆಯೋ।।7।।

## ಶ್ರೀ ರಾಘವೇಂದ್ರ ಸ್ವಾಮಿಗಳು

### ಮಂಗಳದ ಮಂತ್ರ ಸನ್ಮಂದಿರದ — ರಾಗ: ಕಾಂಭೋದಿ

ಮಂಗಳದ ಮಂತ್ರ ಸನ್ಮಂದಿರದ ಅಂಗಣದಿ।।ಪ।। ತುಂಗ ಸುತರಂಗಿಣಿಯು ಹರುಷದಲಿ ನಲಿಯುತಿರೆ। ತಂಗಾಳಿ ಬೀಸುತಲಿ ಪರಿಮಳವ ಸೂಸುತಿರೆ।।ಅ.ಪ।। ರಾಘವೇಂದ್ರಾಂಕಿತದಿ ಸೂರ್ಯನುದಯಿಸಲು ಭಾಗವತ ಹೃದಯ ಕಮಲಗಳು ಅರಳುತಿರೆ। ಬಾಗಿ ನಮಿಸುವ ಭೃಂಗಗಳು ಝೇಂಕರಿಸೆ।।1।। ಶೃಂಗಾರತರವಾದ್ಯ ಮೇಳಗಳು ಮೊಳಗುತಿರೆ। ಸಂಗೀತ ನರ್ತನಕೆ ಆಹ್ವಾನವೀಯುತಿರೆ। ತುಂಗಾ ತಟದೊಳ್ ಮಂಗಳ ಮಠದೊಳ್।।2।। ಸಂಗೀತಜ್ಞರು ರಾಜಿಪರೆಡೆಯೊಳ್ ರಾಗತಾಳ ನವಭಾವಗಳಿಂದ ಶೃಂಗಾರಾಕ್ಷಿ ನಲಿಯುವ ಬಾಬಾ। ಶೃಂಗಾರಾಕ್ಷೀ ಕುಣಿಯುವ ಬಾ।।3।। ಖೂಳ ದೈತ್ಯರ ಖಡ್ಗವ ಪಿಡಿದು ಬಾಲನಿನ್ನ ದೇವನ ತೋರೆನಲು। ನಲಿಯುತ ಹರಿಯನು ತೋರಿದ ಪ್ರಭುವ। ಲೀಲೆಯಿಂದ ನಾವ್ ನಮಿಸುವ ಬಾಬಾ।।4।। ನೊಂದರಿಗಂದದಿ ಚಂದ್ರಿಕೆ ನೀಡಿ। ಚಂದದಿ ನ್ಯಾಯಾಮೃತವನು ಕುಡಿಸಿ ಪಂಡಿತರನು ತಾಂಡವದಿಂಮುದಿಸಿ ವಂದ್ಯರೆನಿಪ ವ್ಯಾಸಾರ್ಯರ ನಮಿಸಿ।।5।। ಸುಂದರ ವೀಣೆಯ ಕರದಲಿ ಧರಿಸಿ। ಚಂದದೀ ಸರಿಗಮ ಸ್ವರಗಳ ನುಡಿಸಿ ನಾದದೇವ ಕಮಲೇಶನ ಕುಣಿಸಿ। ಅಂದದಿ ರಾಜಿಪ ರಾಯರ ಭಜಿಸಿ।।6।।

### ರಾಯ ಬಾರೋ ತಂದೆ ತಾಯಿ ಬಾರೋ

ರಾಯ ಬಾರೋ ತಂದೆ ತಾಯಿ ಬಾರೋ ನಮ್ಮ ಕಾಯೊ ಬಾರೋ। ಮಾಯಿಗಳ ಮರ್ದಿಸಿದ ರಾಘವೇಂದ್ರ ರಾಯ ಬಾರೋ।।ಪ।। ಭಾಸುರ ಚರಿತನೆ ಭೂಸುರ ವಂದ್ಯನೆ। ಶ್ರೀ ಸುಧೀಂದ್ರಾರ್ಯರ ವರಪುತ್ರ ರಾಯ ಬಾರೋ। ಶ್ರೀ ಸುಧೀಂದ್ರಾರ್ಯರ ವರಪುತ್ರರೆನಿಸಿದ। ದೇಶಿಕರೊಡೆಯ ರಾಘವೇಂದ್ರ ರಾಯ ಬಾರೋ।।1।। ವಂದಿಪ ಜನರಿಗೆ ಮಂದಾರ ತರುವಂತೆ। ಕುಂದಾದಭೀಷ್ಟೆಯ ಸಲಿಸುತಿಪ್ಪ ರಾಯ।। ಕುಂದದಾಭೀಷ್ಟ ಸಲ್ಲಿಸುತ್ತಿಪ್ಪ ಸರ್ವಜ್ಞ। ಮಂದ ಮತಿಗೆ ರಾಘವೇಂದ್ರ ರಾಯ ಬಾರೋ।।2।। ಆರು ಮೂರೇಳು ನಾಲ್ಕೆಂಟು ಗ್ರಂಥ ಸಾರಾರ್ಥ। ತೋರಿಸಿದೆ

ನ್ಯಾಯದಿಂದ ಸರ್ವರಿಗೆ ನ್ಯಾಯದಿಂದ ಸೂರಿಗಳರಸನೆ ರಾಘವೇಂದ್ರಾ ರಾಯ ಬಾರೋ।।3।। ರಾಮ ಪಾದಾಂಬುಜ ಸರಸಭೃಂಗ। ಕೃಪಾಪಾಂಗ ಭ್ರಾಮಕ ಜನರ ಮಾನಭಂಗ ರಾಯ ಬಾರೋ। ಭ್ರಾಮಕ ಜನ ಸನ್ಮಾನಭಂಗ ಮಾಡೀದಾ। ಧೀಮಂತರೊಡೆಯನೆ ರಾಘವೇಂದ್ರಾ ರಾಯ ಬಾರೋ।।4।। ಭೂತಳಾಧಿಪನಾ ಭೀತಿಯ ಬಿಡಿಸಿದೆ। ಪ್ರೇತತ್ವ ಕಳೆದೆ ಮಹಿಷಿಯಾ ರಾಯ ಬಾರೋ। ಪ್ರೇತತ್ವ ಕಳೆದೆ ಮಹಿಷಿಯಾ ಶ್ರೀಜಗ।ನ್ನಾಥ ವಿಠ್ಠಲನಾ ಪ್ರೀತಿಪಾತ್ರಾ ರಾಯ ಬಾರೋ।।5।।

## ರಾಘವೇಂದ್ರ ಯತಿಸಾರ್ವಭೌಮ

ರಾಘವೇಂದ್ರ ಯತಿಸಾರ್ವಭೌಮ ದುರಿತೌಘದೂರ ತೇ ನಮೋ ನಮೋ।।ಪ।। ಮಾಗಧರಿಪು ಮತಸಾಗರಮೀನ ಮಮಾಘವಿನಾಶನ ನಮೋ ನಮೋ। ಶ್ಲಾಘಿತಗುಣಗಣ ಸೂರಿಪ್ರಸಂಗ ಸದಾಗಮಜ್ಞತೇ ನಮೋ ನಮೋ। ಮೇಘಶ್ಯಾಮಲರಾಮಾರಾಧಕಾಮೋಘಬೋಧ ತೇ ನಮೋ ನಮೋ।।1।। ತುಂಗಭದ್ರ ಸುತರಂಗಿಣಿತೀರಗಮಂಗಳ ಚರಿತ ಶುಭಾಂಗ ನಮೋ। ಇಂಗಿತಜ್ಞ ಕಾಳಿಂಗಮರ್ದ ಯದುಪುಂಗವಹೃದಯಸುಸಂಗ ನಮೋ। ಸಂಗಿರಚಿಹ್ನಿತ ಶೃಂಗಾರಾ ನನ ತಿಂಗಳ ಕರುಣಾಪಾಂಗ ನಮೋ। ಗಾಂಗೇಯಸಮಾಭಾಂಗ ಕುಮತಮಾತಂಗಸಿಂಗ ಶಿತಪಿಂಗ ನಮೋ।।2।। ಕೋವಿದಮಸ್ತಕ ಶೋಭಿತಮಣಿಸಂಭಾವಿತಮಹಿಮ ಪಾಲಯಮಾಂ। ಸೇವಾಪರಸರ್ವಾರ್ಥ ಪ್ರದವೃಂದಾವನಮಂದಿರ ಪಾಲಯ ಮಾಂ। ಭಾವಜಮಾರ್ಗಣ ಭುಜಗವಿನಾಯಕಭಾವಜ್ಞಪ್ರಿಯ ಪಾಲಯ ಮಾಂ। ಕೇವಲನತಜಪಾವನರೂಪ ಸದಾವಿನೋದಿ ಹೇ ಪಾಲಯ ಮಾಂ।।3।। ಶ್ರೀಸುಧೀಂದ್ರ ಕರಜಾತ ನಮೋ ನಮೋ ಭೂಸುರನುತವಿಖ್ಯಾತ ನಮೋ। ದೇಶಿಕವರಸಂಸೇವ್ಯ ನಮೋ ನಮೋ ದೋಷವಿವರ್ಜಿತ ಕಾವ್ಯ ನಮೋ। ಕ್ಲೇಶಿತಜನಪರಿಪಾಲ ನಮೋ ನಮೋ ಭಾಸಿತ ಕರುಣಾಶೀಲ ನಮೋ ವ್ಯಾಸರಾಯಪದಭಕ್ತ ನಮೋ ನಮೋ ಶಾಶ್ವತಧರ್ಮಾಸಕ್ತ ನಮೋ।।4।। ಸನ್ನುತಮಹಿಮ ಜಗನ್ನಾಥವಿಠಲ ಸನ್ನಿಹಿತಸುಮಾನಸ ಜಯ ಭೋ। ಚಿಹ್ನಿತ ದಂಡಕಮಂಡಲಪುಂಡ್ರ ಪ್ರಪನ್ನಭಯಾಪಹ ಜಯ ಜಯ ಭೋ। ಮಾನ್ಯಮಹಾತ್ಮ ಪ್ರಸನ್ನವದನ ಕಾರಣ್ಯಪಯೋದಧೇ ಜಯ ಜಯ ಭೋ। ಧನ್ಯ ಕ್ಷಮಾಸಂಪನ್ನ ಬುಧಜನ ಶರಣ್ಯ ಪಯೋದಧೇ ಜಯ ಜಯ ಭೋ।।5।।

## ನಮೋ ನಮೋ ಶ್ರೀ ರಾಘವೇಂದ್ರ

ನಮೋ ನಮೋ ಶ್ರೀ ರಾಘವೇಂದ್ರ। ಸದ್ಗುಣ ಸಾಂದ್ರ। ಕಮಲ ನಾಭನ ದಾಸ ಕಮಲಾಪ್ತ ಭಾಸ।।ಪ।। ದೇಶ ದೇಶಗಳಿಂದ ದೈನ್ಯದಿಂದಲಿ ಬಂದಾ। ಶೇಷ ಜನರಿಗಳಿಗಿಷ್ಟ ಸಲ್ಲಿಸುವ ವಿಶಿಷ್ಟಾ। ನಾ ಸೇರಿದೆನೋ ನಿನ್ನ ನಮಿತ ಜನರ ಪ್ರಸನ್ನ। ಭಾಸುರ ಚರಿತನೆ ಭಜಿಸುವೆನು ಅನವರತ।।1।। ಭೇದಾರ್ಥ ಜಲಜಾರ್ಕ ಭೂರಿ ಬಲತರತರ್ಕ। ವಾದಿಶೈಲ ಕುಶಲ ವರಹಸುತೆ ವಾಸಾ। ಬಾಧಿಪ ಅಘಜೀರ್ಣ ಮಾಡು ಗುರುವರ ಪೂರ್ಣ। ಬೋಧ ಮತ ಸಂಭೂತ ಭೂರಿ ಪ್ರಖ್ಯಾತ।।2।। ನತಜನಾಶ್ರಯ ಪ್ರೀಯ ನೆರೆ ನಂಬಿದೆನೋ ಮಾಯಾ। ಮತ ಕದಳಿ ಗಜೇಂದ್ರ ವಿಬುಧಾಬ್ಧಿ ಚಂದ್ರ। ಕ್ರತು ಭುಕು ಜಗನ್ನಾಥ ವಿಠಲನ್ನ ನಿಜದೂತ। ತುತಿಸಲಾಪೆನೆ ನಿನ್ನ ಯತಿಶಿರೋರನ್ನ।।3।।

## ರಾಘವೇಂದ್ರ ರಾಜಿತ ಗುಣಸಾಂದ್ರ

ರಾಘವೇಂದ್ರ ರಾಜಿತ ಗುಣಸಾಂದ್ರ।।ಪ।। ರಾಘವೇಂದ್ರ ಗುರುರಾಯ ಘೋರ ಪಾ-ಪೌಘ ಗಳೆಣಿಸದೆ ಪಾಲಿಸು ಬಿಡದೆ।।ಅ.ಪ।। ಪ್ರಕಟಿಸಿ ತೋರಿದಿ ಮುಕುತಿಯ ಬೇಡಿದ-ಭಕುತನ ಯೋಗ್ಯತೆ ನಿಖಿಳ ಜನರಿಗೆ।।1।। ಕನಲಿದ ಜನಪನ ಅನುನಯದಲಿ- ನಿನ್ನಣುಗನ ಮಾಡಿದೆ ಘನತರಚರಿತ ।।2।। ಪತಿತನ ನಿಜ ಯೋಗ್ಯತೆಯನರಿತು ಸ-ದ್ಗತಿಯ ಪಾಲಿಸಿದೆ ಯತಿಕುಲವರಿಯ।।3।। ದ್ವಾದಶವರುಷಾನ್ನೋದಕ ಸಲಿಸಿದೆ-ಮೇದಿನಿಪತಿಗೆ ಮಹಾದಯ ವಂತ।।4।। ಕ್ಷಿಪ್ರದಿ ತೋರಿದೆ ವಿಪ್ರರ ಮಹಿಮೆಯ-ಆ ಪೃಥ್ವೀಶಗೆ ಅಪ್ರತಿ ಗುರುವೆ ।।5।।

## ಗುರು ರಾಘವೇಂದ್ರ ಚರಣ

ಗುರು ರಾಘವೇಂದ್ರ ಚರಣ ಕಮಲವನ್ನು। ಸ್ಮರಿಸುವ ಮನುಜರಿಗೆ॥ಪ॥ ಕರೆಕರೆಗೊಳಿಸುವ ದುರಿತ ದುಷ್ಕೃತ್ಯವೆಲ್ಲ। ಕರಿಯು ಸಿಂಹನ ಕಂಡ ತೆರನಾಗುವುದಯ್ಯ॥ಅ.ಪ.॥ ಗುರುಮದ್ವಮತ ವೆಂಬ ವರ ಕ್ಷೀರಾಂಬುಧಿಯಲ್ಲಿ। ಹರ ಧರಿಸಿದ ಶಶಿಯಂತುದಿಸಿ ಪರಮತ ತಿ। ಮಿರಕ್ಕೆ ತರಣಿಕಿರಣನೆನಿಸಿ ಪಿರಿದು। ಮೆರೆವ ಸಿರಿ ರಾಮನರ್ಚಕರಾದ॥1॥ ಹರಿಯೇ ಸರ್ವೋತ್ತಮ ಸಿರಿಯು ಆತನ ರಾಣಿ। ಪರಮೇಷ್ಠಿ ಮರುತರೆ ಗುರುಗಳೆಂದು। ಗರುಡಶೇಷರುದ್ರ ಸಮರೆಂದು ಸ್ಥಾಪಿಸಿ। ಸ್ಥಿರ ತಾರತಮ್ಯ ಪಂಚಭೇದ ಸತ್ಯವೆಂಬ॥2॥ ಅಂಧಕರಿಗೆ ಚಕ್ಷು ವಂದ್ಯರಿಗೆ ಸುರತರು। ಬಂದಬಂದವರಭೀಷ್ಟಗಳನಿತ್ತು। ಒಂದಾರುನೂರು ವತ್ಸರ ವೃಂದಾವನದಲ್ಲಿ। ಚೆಂದಾಗಿ ನಿಂದು ಮೆರೆವ ಕೃಪಾಸಿಂಧು ದೇವಾಂಶರ॥3॥ "ರಾ" ಎನ್ನೆ ದುರಿತರಾಶಿಗಳ ದಹಿಸುವ। "ಘ" ಎನ್ನೆ ಘನ ಜ್ಞಾನ ಭಕುತಿ ಈವ। "ವೇಂ" ಎನ್ನೆ ವೇಗದಿ ಜನನಮರಣ ದೂರ। "ದ್ರ" ಎನ್ನೆ ದ್ರವಿಣಾರ್ಥ ಶ್ರುತಿ ಪ್ರತಪಾದ್ಯನ ಕಾಂಬ॥4॥ ವರ ತುಂಗಾತೀರ ಮಂತ್ರಾಲಯ ಪುರದಲ್ಲಿ। ಪರಿಪರಿ ಸೇವೆ ಭೂಸುರರಿಂದ ಕೊಳುತ। ಸಿರಿಯರಮಣ ನಮ್ಮ ಗೋಪಾಲವಿಠ್ಠಲನ। ಚರಣ ಸೇವಿಸುತಿಪ್ಪ ಗುರು ಶಿಖಾಮಣಿಯಾದ॥5॥

## ಸುರಪಾನಾಲಯದಂತೆ ಮಂತ್ರಾಲಯ

ಸುರಪಾನಾಲಯದಂತೆ ಮಂತ್ರಾಲಯ। ಕರೆಸುವುದು ಕಂಗೊಳಿಸುವುದು ನೋಳ್ಪ ಜನಕೆ॥ಪ॥ ಕಾಮಧೇನುವಿನಂತೆ ಇಪ್ಪ ಗುರುವರ ಸಾರ್ವ। ಭೌಮ ಸುಧೀಂದ್ರಸುತ ರಾಘವೇಂದ್ರ। ಅಮಯಾಧಿ ಖಳತಮಿಶ್ರ ಓಡಿಸುವ ಚಿಂ। ತಾಮಣಿ ಪ್ರಕಾಶದಂತಿಪ್ಪ ವೃಂದಾವನದಿ॥1॥ ಸುರತರುವಿನಂತಿಪ್ಪ ಕೀರ್ತಿ ಸಚ್ಛಾಯಾಶ್ರೀ ತರ ಮನೋರಥಗಳನು ಪೂರೈಸುವಾ। ಧರಣಿಸುರಾಖ್ಯ। ಷಟ್ಪದಗಳಿಗೆ ಸತ್ಯದಾ। ಪರಿಮಳದ ತೃಪ್ತಿಬಡಿಸುವ ಮರುತನಂತೆ॥2॥ ವಾರಾಹಿ ಎಂಬ ನಂದನ ವನದಿ ಜನರತಿ ವಿಹಾರ ಮಾಳ್ಪರು ಸ್ನಾನಪಾನದಿಂದಾ। ಶ್ರೀರಾಘವೇಂದ್ರರಿಲ್ಲಿಪ್ಪ ಕಾರಣ. ಪರಮ ಕಾರುಣ್ಯನಿಧಿ ಜಗನ್ನಾಥ ವಿಠಲನಿಹನು॥3॥

## ವಂದಿಸುವೆ ಗುರು ರಾಘವೇಂದ್ರಾರ್ಯರ

ವಂದಿಸುವೆ ಗುರು ರಾಘವೇಂದ್ರಾರ್ಯರ। ವೃಂದಾವನಕೆ ಪ್ರತಿ ಪ್ರತಿ ದಿನಗಳಲ್ಲಿ॥ಪ॥ ಸುವಿರೋಧಿ ಸಂವತ್ಸರದ ಶ್ರಾವಣ ಪರ ದ್ವಿತೀಯ। ರವಿವಾರ ತುಂಗಭದ್ರಾ ತೀರದಾ। ನವಸುಮಂತ್ರಾಲಯದಿ ದೇಹವನ್ನು ಬಿಟ್ಟು ಮಾ। ಧವನ ಪುರವೈದಿದ ಮಹಾತ್ಮರಿವರ ಹುದೆಂದು॥1॥ ಸ್ವಪದಾವಲಂಬಿ ಗಳಿಗುಪನಿಷತ್ ಖಂಡಾರ್ಥ ಉಪದೇಶಗೈದು ಕಾಶ್ಯಸುರ ರನಾ। ಪುನೀತರನ ಮಾಡಿ। ಅಪವರ್ಗ ದಾಸರೊಳು ಪಮರಿಲ್ಲೆಂದರುಪಿದುಪಕಾರಿಗಳ ಕಂಡು॥2॥ ದೇವತೆಗಳಿವರು ಸಂದೇಹ ಬಿಡುಸಲ್ಲ। ವೃಂದಾವನವ ರಚಿಸಿ ಪೂಜಿಪ ಭಕ್ತರ। ಸೇವೆ ಕೈ ಕೊಂಡವರ ಮನೋರಥವ ಸಲಿಸುವರು ಜಗನ್ನಾಥ ವಿಠಲಗೆ ಪ್ರಿಯರೆಂದು॥3॥

## ಸ್ಮರಿಸಿ ಬೇಡುವೆನು ನಾ ಹೇ ಗುರು

ಸ್ಮರಿಸಿ ಬೇಡುವೆನು ನಾ ಹೇ ಗುರು ಸಾರ್ವಭೌಮಾ॥ಪ॥ ನಿರುತ ನೀ ಪೊರೆ ಎನ್ನ ವಾದಿಗಜಸಿಂಹ॥ಅ.ಪ.॥ ದಿತಿಸುತಗೆ ಸುತನೆನಿಸಿ। ಅತಿ ಮುದದಿ ಸುರಮುನಿಯ। ಮತ ಹಿಡಿದು ಹರಿಯ ಮಹಿಮೆ ಪಿತಗೆ ಪೇಳಿ। ಖತಿಗೊಂಡು ನಿನ್ನ ಮೂರುತಿ ತೋರೆನಲು ಶ್ರೀ। ಪತಿಯ ಸ್ತಂಭದಿ ಕರೆದೆ ಪ್ರಹ್ಲಾದ ರಾಜ॥1॥ ಬಾಲ್ಯದಲಿ ಯತಿಯಾಗಿ ಲೀಲೆಯಿಂದಲಿ। ಭೂಮಿ। ಪಾಲಗೊದಗಿರ್ದ ಕುಹು ಯೋಗ ಬಿಡಿಸಿ। ಖೂಳ ಮಾಯಳ ಜಯಿಸಿ ಚಂದ್ರಿಕಾ ಗ್ರಂಥವನು। ಪೇಳಿ ಹರಿಪೀಠವೇರಿದ ವ್ಯಾಸರಾಜ॥2॥ ಕಾಮರಿಪುನುತ ಮೂಲರಾಮಪದ ಯುಗ ಕುಮುತ। ಸೋಮನೆನಿಸುವ ಭಕ್ತಸ್ತೋಮಕ್ಕೆಲ್ಲ। ನೇಮದಿಂದಲಿ ವಿವಿಧ ಕಾಮಿತಾರ್ಥ ಸ್ಫುಟತ। ಹೇಮಸನ್ನಿಭ ಗಾತ್ರ ಪಾವನ ಚರಿತ್ರ॥3॥ ಶಾಂತತೆಯ ಪೊಂದಿ ಮಂತ್ರಾಲಯದಿ ವೃಂದಾವ। ನಾಂತರದೊಳಿರುತ ಸಿರಿಕಾಂತ ಹರಿಯಾ।

ಚಿಂತಿಸುತಲಿಹ ಸರ್ವತಂತ್ರ ಸ್ವತಂತ್ರ ಕರು। ಣಾಂತರಂಗನೆ ರಾಘವೇಂದ್ರ ಯತಿವರ್ಯಾ॥4॥ ಮೂಕ ಬಧಿರಾಂಧತ್ವಗಳ ಪೊಂದಿ ಧರಣಿಯೊಳು। ವ್ಯಾಕುಲವ ಪಡುವವರನುದ್ದರಿಸುತ। ನಾಕಪತಿವಿನುತ ಜಗನ್ನಾಥವಿಠಲನ ಮಧುಪ। ನೀ ಕೊಟ್ಟು ಸಲಹೆನ್ನಭೀಷ್ಟ ಸಮುದಾಯ॥5॥

## ಭೋ ಯತಿವರದೇಂದ್ರಾ

ಭೋ ಯತಿವರದೇಂದ್ರಾ! ಶ್ರೀ ಗುರುರಾಯ ರಾಘವೇಂದ್ರಾ। ಕಾಯೋ ಎನ್ನ ಶುಭಕಾಯ ಭಜಿಸುವೆನು - ಕಾಯೋ ತವಕ ಚಂದ್ರಾ॥ಪ॥ ನೇಮವು ಎನಗೆಲ್ಲಿ ಇರುವುದು ಕಾಮಾಧಮನಲ್ಲಿ ಶ್ರೀಮಹಾಮಹಿಮನೆ। ಪಾಮರ ನಾ ನಿಮ್ಮ ನಾಮ ಒಂದೇ ಬಲ್ಲೆ॥1॥ ಕಂಡ ಕಂಡ ಕಡೆಗೆ ತಿರುಗಿ ಬೆಂಡಾದನೊ ಕೊನೆಗೆ ಕಂಡ ಕಂಡ ಕಡೆಗೆ ತಿರುಗಿ ನಿಮ್ಮ ಕಂಡೆ ಕಟ್ಟಕಡಿಗೆ॥2॥ ಮಂತ್ರವ ನಾನರಿಯೇ ಶ್ರೀಮಾನ್ ಮಂತ್ರಾಲಯ ದೊರೆಯೇ। ಅಂತರಂಗದೊಳು ನಿಂತು ಪ್ರೇರಿಸೊ ಅನಂತಾದ್ರೀಶ ದೊರೆಯೇ॥3॥

## ಗುರುರಾಜ ನಿನ್ನ ಹೊರತು

ಗುರುರಾಜ ನಿನ್ನ ಹೊರತು ಪೊರೆವ ದೊರೆಗಳ ಕಾಣೆ। ಶರಣಜನರಿಷ್ಟವನೆ ಸುರತರು ವಿನಂತೀ ವೆ ॥ಪ॥ ತರಳಪ್ರಹ್ಲಾದನಾಗಿರಲು ವರಭಕುತಿಯಿಂ। ನರಹರಿಯ ಮೆಜಚ್ಚಿಜಸಿದೆ ಪರಮಕರುಣಾ ಸಿಂಧೂ॥1॥ ವ್ಯಾಸಮುನಿಯು ನೀನೆ ವಾಸುದೇವನ ಭಜಿಸಿ। ಲೇಸಾದ ಚಂದ್ರಿಕೆಯ ಭೂಸುರರಿಗರುಹಿದೆ॥2॥ ಶ್ರೀರಾಮಚಂದ್ರ ಪದಸರಸೀರುಹಾಭೃಂಗ। ಶ್ರೀ ರಾಘವೇಂದ್ರಯತಿ ಸುರುಚಿರಕೃಪಾಪಾಂಗ॥3॥ ನರಹರಿ ಸಿರಿರಾಮ ಮುರವೈರಿ ಮುನಿವ್ಯಾಸ। ಇರುತಿಹರು ನಿನ್ನೊಳು ಧರೆಯ ಪಾಲಿಸೆ ಮುದದಿ॥4॥ ಭೀಮಸೇತ್ವ್ಯಾಖ್ಯ ಮಠ ಸೋಮ ರಘುತಿಲಕರಿಂ। ದೇ ಮಹಾಸೇವೆಯ ಕೈಗೊಂಡೆಯೋ ಮುದದಿ॥5॥ ದೋಷದೂರನೆ ಪ್ರಭುವೆ ಆಶೆಯಿಂದ ಸೇವಿಪರ। ಕ್ಲೇಶವೆಲ್ಲವನಳಿದು ಶ್ರೀಶಕೇಶವನೊಲಿಸೊ॥6॥

## ಕರುಣಿ ಕಾಯೋ ರಾಘವೇಂದ್ರ ಗುರುವೇ

ಕರುಣಿ ಕಾಯೋ ರಾಘವೇಂದ್ರ ಗುರುವೇ। ನೆರೆನಂಬಿದವರ ಕಾಮಿತ ಕಲ್ಪತರುವೇ॥ಪ॥ ತೀರ್ಥಪಾದನ ಪಾದಪಂಕಜ ಭೃಂಗಾ। ಧೂರ್ತವಾದಿಗಳಂಥ ತಿಮಿರ ಪತಂಗ॥ ಕಾರ್ತಸ್ವರಾ ಲೋಷ್ಟ ಸಮ ಚಿತ್ತ ಸಂಗ। ಆರ್ತಜನರ ಪಾಲಾ ಅತಿದಯಾಪಾರ॥1॥ ಚಪಲ ಚಿತ್ತರು ತಮ್ಮ ಜಪ ತಪದಿಂದು। ವಿಪರೀತ ಕರ್ಮ ಪೋಗುವವು ಹೀಗೆಂದು॥ ಅಪಹಾಸ ಅಲ್ಲವೋ ಇದು ಏನು ಛಂದು। ಕೃಪಣ ವತ್ಸಲ ಕಾಯೋ ಅತಿ ದಯಾಸಿಂಧು॥2॥ ಫಲ ಬೇಡಿ ಸೇವೆ ಮಾಡುವ ದಾಸನಾನಲ್ಲ। ಫಲಕೆ ಸೇವೆ ಇಚ್ಛಿಸುವ ಸ್ವಾಮಿ ನೀನಲ್ಲ॥ ಹಲವು ಮಾತೇನು ಈ ವಿವರಗಳ ನ್ನೆಲ್ಲಾ। ತಿಳಿದ ಸರ್ವಜ್ಞರಿಗೆ ಬಿನ್ನೈಸು ಸೊಲ್ಲಾ॥3॥ ಸೋತ್ತಮಾಭೀಷ್ಟ ಪುಣ್ಯವೇ ಬಂದು। ಭೃತ್ಯರ ಸುಖಕೆ ಕಾರಣವಾಹುದೆಂದು॥ ಕ್ಲುಪ್ತವಾಗಿದೆಯೇನು ಎಂದು। ಇತ್ತು ಪಾಲಿಸ ಬೇಕು ದೀನ ಜನ ಬಂಧೋ॥4॥ ಮರುದಂಶ ಮಧ್ವ ಮತಾಬ್ಧಿ ಚಂದಿರನೇ। ಪರಮ ಕಲ್ಯಾಣ ಗುಣರತ್ನಾಕರನೇ॥ ದುಕಾತ ಜೀಮಾತಕೆ ಚಂಡಮಾರುತನೇ। ಗುರು ಗೋಪಾಲ ವಿಠ್ಠಲನೆ ಚರಣ ಭಜಕನೇ॥5॥

## ನೋಡೆಲೆ ಮನವೇ ಕೊಂಡಾಡು

ನೋಡೆಲೆ ಮನವೇ ಕೊಂಡಾಡು ಗುರುಗಳ ಪಾದ। ಈಡಿಲ್ಲವೋ ಪುಣ್ಯಕೆ॥ಪ॥ ನಾಡೊಳಗೆ ಗುರುರಾಘವೇಂದ್ರ ರಾಯರ ಸೇವೆ ಮಾಡಿದವ ಪರಮ ಧನ್ಯ ಮಾನ್ಯ॥ಅ.ಪ.॥ ನಿಷ್ಠೆಯಿಂದಲಿ ಸ್ಮರಿಸೆ ಕಷ್ಟಗಳ ದೂರ ಮನೋಭೀಷ್ಟಗಳ ಪೂರೈಪರೋ। ಅಷ್ಟಸೌಭಾಗ್ಯವನೇ ಕೊಟ್ಟು ಸುಜನರಿಗೆ ಶ್ರೀವಿಷ್ಣು ದಾಸ್ಯವ ತೋರ್ಪರೋ॥ ದೃಷ್ಟಿಯಿಂದಲಿ ನೋಡಲನೇಕ ಜನ್ಮದ ಪಾಪ ಬಿಟ್ಟು ಪೋಪವೊ ಕ್ಷಣದಲಿ। ಎಷ್ಟು ಹೇಳಲಿ ಇವರ ನಿಷ್ಠೆ ಮಹಾತ್ಮೆಯನು ದುಷ್ಟರಿಗೆ

ದೊರೆಯದಿವರಾ ಸೇವೆ॥1॥ ಹಲವು ಕ್ಷೇತ್ರಗಳ್ಯಾಕೆ ಹಲವು ತೀರ್ಥಗಳ್ಯಾಕೆ ಫಲ ಸುಲಭದಲ್ಲಿರಲು। ಬಲವು ಇದ್ದದ್ದರೊಳು ಪ್ರದಕ್ಷಿಣೆ ಸಂಪದಜಲ ತಲೆಯಲ್ಲಿ ಧರಿಸಿ ನಿತ್ಯ। ಮಲ ರಹಿತನು ಆಗಿ ದಂಡಪ್ರಣಾಮಮಾಡೆ ಒಲಿವರು ಕರುಣದಲಿ ಬೇಗ ಜಲಜನಾಭನು ನಾಲ್ಕು ರೂಪದಿಂದಿವರಲ್ಲಿ। ಸಿಲುಕಿ ಪೂಜೆಯ ಕೊಂಬ ಸತತ ಮೋಕ್ಷದಾತಾ॥2 ಹರಿದಾಸರಿದ್ದ ಸ್ಥಳ ವರಕಾಶಿ ಮೋದಲಾದ ಕುರುಕ್ಷೇತ್ರಕಿಂತಧಿಕವೋ। ಸುರಋಷಿ ಮುನಿಗಳು ಇಲ್ಲಿಹರು ವೈಕುಂಠ ಸರಿಮಿಗಿಲು ಎಂದೆನಿಪುದೋ॥ ಪರಮ ಸುಜ್ಞಾನಿಗಳಿಗೀ। ಫಲವು ದೊರಕುವುದು ತರತಮದಿ ಇತರ ಜನಕೆ। ಗುರು ಶ್ರೀಶ ವಿಠಲನು ಇವರ ರೂಪ ನಾಮದಲಿ। ಪರಿಪರಿಯ ವರವಗರೆವಾ ಪೊರೆವಾ॥3॥

## ಗುರುವಿನ ಕರುಣದಿ ಭಕ್ತಿ

ಗುರುವಿನ ಕರುಣದಿ ಭಕ್ತಿ ಜ್ಞಾನಾದಿಗಳು। ಗುರುವಿನ ಕರುಣದಿ ವೈರಾಗ್ಯ ಭಾವವು। ಗುರುವಿನ ಕರುಣದಿ ತತ್ವ ಸಾಧನೆಗಳು। ಗುರುವಿನ ಕರುಣದಿ ಆತ್ಮ ವಿವೇಕಗಳು। ಗುರುವಿನ ಕರುಣದಿ ಅಪರೋಕ್ಷ ಪುಟ್ಟಲು। ಗುರುವಿಕೆಯನೆ ಬಿಡಿಸಿ ಕರೆದುಕೊಡು ಮುಕ್ತಿ। ಗುರು ಅಂತರ್ಯಾಮಿ ಶ್ರೀ ಗೋಪಾಲಕೃಷ್ಣವಿಠಲನ॥

## ಯಾಕೆ ಮೂಕನಾದ್ಯೋ ಗುರುವೇ — ರಾಗ: ಶಿವರಂಜನಿ

ಯಾಕೆ ಮೂಕನಾದ್ಯೋ ಗುರುವೇ ನೀ ಯಾಕೆ ಮೂಕನಾದೋ॥ಪ॥ ಯಾಕೆ ಮೂಕನಾದಿ-ಲೋಕಪಾಲಕ। ಎನ್ನ ಸಾಕುವರಾರಯ್ಯಾ ಶ್ರೀಕರ ರಾಘವೇಂದ್ರಾ॥ ಬೇಕಾಗದಿದ್ದರೆ ಯಾಕೆ ಕೈಯನು ಪಿಡಿದೆ?। ಕಾಕುಜನರೊಳೆನ್ನ ನೂಕಿ ಬಿಟ್ಟು ನೀ॥1॥ ಹಿಂದಕ್ಕೆ ನೀ ಎನ್ನ ಮುಂದೆ ಸುಳಿದಾಡಿದೆ। ಮಂದಿಯೊಳಗೆ ಎನ್ನ ಮಂದನ್ನ ಮಾಡಿದೀಗ। ಈಗ ಪಾಲಿಸದಿರೆ-ಯೋಗಿ ಕುಲವರ್ಯ। ರಾಘವೇಂದ್ರನೇ ಭವ ಸಾಗುವುದ್ಹೇಗಯ್ಯಾ॥2॥ ನಿನ್ನಂಥ ಕರುಣೆಲ್ಲ-ಎನ್ನಂಥ ಕೃಪಣೆಲ್ಲ। ಘನ್ನ ಮಹಿಮ ನೀ ಎನ್ನನು ಬಿಟ್ಟೀಗ। ಜನನಿಯು ನೀ ಎನಗೆ ಜನಕನು ನೀನಯ್ಯಾ। ಮನ್ನಿಸೋ ನೀ ನಿತ್ಯ ಅನನ್ಯ ಶರಣನಯ್ಯಾ॥3॥ ಎಂದಿಗಾದರೂ ನಿನ್ನ ಪೊಂದಿಕೊಂಡವನಲ್ಲೆ। ಇಂದು ನೀ ಬಿಟ್ಟರೆನ್ನ-ಮುಂದೆ ಕಾಯುವರಾರೋ। ನಾಥನು ನೀನಯ್ಯಾ-ಅನಾಥನು ನಾನಯ್ಯಾ। ನಾಥೋಜ ಗುರು ಜಗನ್ನಾಥವಿಠಲಪ್ರಿಯಾ॥4॥

## ಬಂದೇವು ಮಂತ್ರಾಲಯಕೆ — ರಾಗ: ಸಿಂಧೂಬೈರವಿ

ಬಂದೇವು ಮಂತ್ರಾಲಯಕೆ-ಭವಬಂಧನವ ಕಳೆವುದಕೆ। ಭವಬಂಧನವ ಕಳೆವುದಕ್ಕೆ-ಗುರು ರಾಯರ ನೋಡುವುದಕೆ॥ಪ॥ ರಾಯರ ಮುದ್ದು ಮಹದ್ವಾರ-ಎಷ್ಟೇಳಲದರ ವಿಸ್ತಾರ। ರತ್ನಮಾಣಿಕ್ಯದ ಗೋಪುರ-ಅದರಲ್ಲಿ ನಿಂತನೆ ಧೀರಾ॥1॥ ತುಂಗಭದ್ರ ಸ್ನಾನವ ಮಾಡಿ-ಮಂಚಾಲೆ ರಾಯರ ನೋಡಿ। ಮುದದಿಂದ ಪದಗಳಪಾಡಿ-ಗುರು ರಾಯರನು ಕೊಂಡಾಡಿ॥2॥ ನರಸಿಂಹ ಭಕ್ತನೆ ಈತ-ಪ್ರಹ್ಲಾದ ರಾಯನೆ ಈತ। ಗುರುಸಾರ್ವಭೌಮನೆ ಈತ-ಭವರೋಗ ವೈದ್ಯನೇ ಈತ॥3॥

## ಸಾಗಿ ಬಂದೆ ಪ್ರಭುವೇ

ಸಾಗಿ ಬಂದೆ ಪ್ರಭುವೇ ಶ್ರೀ ಪಾದಕೆ॥ಪ॥ ಸಾಗಿ ಬಂದೆ ಭವನೀಗದೆ ನೊಂದೆ। ಬೇಗ ಕೈಪಿಡಿ ಗುರುರಾಘವೇಂದ್ರಾರ್ಯ॥ಅ.ಪ.॥ ದುರುಮತ ಕರಿಭಕೆ ವರಮಹಾಕೇಸರಿ। ದರುಮ ಪರಾಕ್ರಮಿ ಪರಮದಯಾಳು। ಅರಮನೆ ಕಾಣದೆ ಸೆರೆಮನೆ ಗೋದೆ। ಮೊರೆಯ ಕೇಳೋ ಪ್ರಭು ಗುರುಮಹಾರಾಜ॥1॥ ದೇವಸ್ವಭಾವ ದಿವ್ಯ ಪ್ರಭಾವ। ಭಾವಿಪ ಭಕುತರ ತಾರಕ ತೇಜ॥ಆವಪಾಪವೊ ಪ್ರಭು ತೀವಿದೆ ತಮವು ಪಾರುಗಾಣಿಸೊ ಗುರುದೇವವರೇಣ್ಯ॥2॥ ಸೂರಿಸುಧೀಂದ್ರರವೀರ ಕುಮಾರ। ಚಾರುಪದಾಂಬುಜ ಸಾರವೆ ಧೀರ। ಸಾರಭಕುತಿ ಪಥ ತೋರಿಸೊ ಪ್ರಭುವೇ ಪಾರುಮಾಡೊ ವಿಠಲೇಶ ಸುಧೇಯ॥3॥

### ಸ್ವಾಮಿ ಲಾಲಿ ಭಕ್ತ ಪ್ರೇಮಿ ಲಾಲಿ ರಾಗ: ಆರಭಿ

ಸ್ವಾಮಿ ಲಾಲಿ। ಭಕ್ತ ಪ್ರೇಮಿ ಲಾಲಿ। ಕಾಮ್ಯಜನರ ಕಾಯ್ವಗುರು ಸಾರ್ವಭೌಮಲಾಲಿ॥1॥ ಇಂದ್ರಲಾಲಿ ರಾಘವೇಂದ್ರ ಲಾಲಿ। ಸಾಂದ್ರಭಕ್ತ ಕುಮುದ ಪೂರ್ಣ ಚಂದ್ರಲಾಲಿ॥2॥ ಶರಣು ಲಾಲಿ। ನಿಜ ಕರುಣೆಲಾಲಿ। ಶರಣ ಜನರ ಕಾವ ಕರುಣಪೂರ್ಣ ಲಾಲಿ॥3॥ ದೇವ ಲಾಲಿ। ನಿಜಭಾವ ಲಾಲಿ। ಭಾವಿಸುವರ ನಿತ್ಯ ನೀ ಕಾವಲಾಲಿ॥4॥ ರಾಜಲಾಲಿ ಕಲ್ಪಭೋಜ ಲಾಲಿ। ರಾಜಿಸುವ ಯತಿಕುಲಾಂಭೋಜ ಲಾಲಿ॥5॥ ದಾತಲಾಲಿ ನಿಜದಾತ ಲಾಲಿ। ಪ್ರೀತ ಗುರು ಜಗನ್ನಾಥವಿಠ್ಠಲಲಾಲಿ॥6॥

## ಶ್ರೀ ವಾದಿರಾಜರು

### ವಾದಿರಾಜರೇ ನಿಮ್ಮ ಪಾದಕ್ಕೆರಗಿ

ವಾದಿರಾಜರೇ ನಿಮ್ಮ ಪಾದಕ್ಕೆರಗಿ ನಾ ಮೋದದಿಂದ ಬೇಡುವೆ ಮಾಧವನ ತೋರೋ॥ಪ॥ ಸಕಲ ವೇದ ಪುರಾಣ ಶಾಸ್ತ್ರಗಳ, ಪ್ರಕಟಿಸಿದಿ ಕನ್ನಡದಿ ಪ್ರೇಮದಿಂದ। ನಿಖಿಳ ಜನರರಿಯು ತಾನಕದುಂದುಭಿ ಸುತನ। ಭಕುತಿಯ ಪಡೆದು ಮೇಣ್ ಮುಕುತಿಯೈದಲಿಯೆಂದು॥1॥ ಗಣನೆಯಿಲ್ಲದ ಕೀರ್ತನೆ ಸುಳಾದಿಗಳು, ಮನವೊಲಿದು ಮಾಡಿದ್ದು ಜನರು ಪಠಿಸಿ॥ ವನಜನಾಭನ ಕರುಣವನು ಪಡೆದು ತಾ, ವಾನಂದನನು ಭವಿಸಲೆಂದೆನುತ॥2॥ ನಿನ್ನ ನೆನೆವನೆ ಧನ್ಯ, ನಿನ್ನ ಪಾಡಿದವ ಮಾನ್ಯ॥ ನಿನ್ನ ಕೊಂಡಾಡಿದವ ಪಾಪಶೂನ್ಯಾ। ನಿನ್ನವನೆನಿಸಿಕೊಂಡ ವೇಣುಗೋಪಾಲ ವಿಠಲ, ಮನ್ನಿಸಿ ಸದ್ಗತಿಯ ಪಾಲಿಪ ಮುದದಿ॥3॥

### ಗುರು ವಾದಿರಾಜ

ಗುರು ವಾದಿರಾಜ ಯತಿಯಾ ನೆನಸುವದು। ನಿರುತ ಕರುಣಿಪ ಮತಿಯಾ॥ಪ॥ ಆರ್ತನಾ ಸರಿದಾರು ನವನ। ವರ್ತಮಾನವನೆ ಕೇಳಿ। ಕರ್ತೃತ್ವ ಪರಿಹರಿಸಿ ಸಂಸ್ಕೃತಿಯ ಗರ್ತದಿಂದೆತ್ತಿ ನೋಳ್ವ॥1॥ ದುರಿತ ರಾಶಿಗಳ ಶೀಳಿ ಹೊರದೆಗೆದು। ಮರುತ ಶಾಸ್ತ್ರವನೆ ಪೇಳಿ। ಪರಮಾರ್ಥ ಮಾರ್ಗವಾ ತೋರಿ ಸುಖಬಡಿಸಿ। ಧರಿಯೊಳಗೆ ಮೆರೆದೆ ಧೀರ॥2॥ ವಂದಿಸಿ ಸೌಂದರ್ಯಪುರಿಯ ವಾಸ ವರಪ್ರದ। ನಂದ ಸತ್ಕೀರ್ತಿ ಭೂಪ। ವಂದಿಸಿದವಗೆ ಲೇಸಾಗಿ ಕೊಡುವ ಮು। ಕುಂದನಂಘ್ರಿಯ ದಾಸ॥3॥ ತೀರ್ಥಯಾತ್ರೆಯನೆ ಮಾಡಿ। ಹರಿ ಭೇದಾರ್ಥದಿಂದಲೆ ಕೊಂಡಾಡಿ। ಅರ್ಥಾಸೆಗಳ ಈಡಾಡಿ। ಹಯಮೊಗನ ಅರ್ಥಿಯಿಂದಲಿ ಪೂಜಿಪ॥4॥ ತ್ರಿಜಗದೊಳಗಿನವರಿಗೆ ಎಣೆಗಾಣೆ। ಕುಜನ ಮತ ಸೋಲಿಸುವಲ್ಲಿ। ವಿಜಯವಿಠ್ಠಲನೆ ದೈವವೆಂದು। ಧ್ವಜವೆತ್ತಿ ತಿರುಗಿದ ಮನಿಪ॥5॥

### ವಾದಿರಾಜ ಗುರು ನೀ ದಯಮಾಡದೇ

ವಾದಿರಾಜ ಗುರು ನೀ ದಯಮಾಡದೇ। ಈ ದುರಿತಗಳ ಕಳೆದಾದರಿಪರಾರೋ॥ಪ॥ ದೈಶಿಕಾ ರ್ಯ ವಾಗೀಶಕುವರ ತವ। ದಾಸಸಮೂಹವ ನೀ ಸಲಹೋ ಸದಾ॥1॥ ನೀ ಗತಿಯೆಂದ ನುರಾಗದಿ ನಂಬಿದೆ। ಭೋಗಪತೀಶನ ರೋಗವ ಕಳೆದೆ॥2॥ ಜನ್ಮಾಧಿವಾದ್ಯುನ್ಮಾದ ಭ್ರಮ। ನಿಮ್ಮ ಮೊರೆ ಹೊಕ್ಕ ಮೇಲಿನ್ನಿರಲುಂಟೆ॥3॥ ಭೂಮಿಪರುಪಟಳ ಕಾಮಹಿನಾಥನು। ತಾ ಮೈಮರೆದಿರೆ ನೀ ಮುದವಿತ್ತೆ॥4॥ ಮೋದಮುನಿಮತ ಪಯೋದಧಿ ಪೂರ್ಣ। ವಿಭೋದಯ ಶರಣರ ಕಾದುಕೋ ಧೊರಿಯೆ॥5॥ ಕಲಿಬಾಧೆಯು ವೆಗ್ಗಳವಾಗಿದೆ ಕಾಯೊ। ಇಳೆಯೊಳು ಯತಿಕುಲ ತಿಲಕ ಕೃಪಾಳೊ॥6॥ ನಿನ್ನೊಡೆಶನಾದ ಜಗನ್ನಾಥ ವಿಠಲನ್ನ। ಉತ್ಸಾಹದಲಿ ತೋರೆನ್ನಮನದಲಿ॥7॥

## ಶ್ರೀ ಜಯತೀರ್ಥರು

**ಜಯರಾಯರ ನೋಡಿರೋ** **ರಾಗ: ಭೈರವಿ-ತ್ರಿತಾಳ**

ಜಯರಾಯರ ನೋಡಿರೋ ಸಜ್ಜನರೆಲ್ಲ। ಜಯರಾಯರ ಪಾಡಿರೋ।।ಪ।। ಜಯರಾಯರ ನೋಡಿ ಜಪಿಸಿ ಮನದಿ ಪಾಡಿ। ಜಯವಾಗುವುದು ನಿಮಗೆ ಭಯ ನಾಶಸಂತತ।।ಅ.ಪ.।। ದುರುಳ ದುರ್ಮತವೆಂಬೊ। ಕರಿಗೆ ಅಂಕುಶವಿತ್ತು। ಸುರಸಾದ ಗ್ರಂಥ ಆನಂದಮುನಿ। ವಿರಚಿಸಿ ಇರಲಾಗಿ ಪರಮ ಭಕ್ತಿಯಿಂದ।।ವಿ। ಸ್ತಾರಮಾಡಿದ ಕರದ ಕನ್ನಡಿಯಂತೆ।।1।। ವಾದಿಗಳನ್ನೆಲ್ಲಾ ಜಯಿಸಿ ಡಂಗೂರ ಹೊಯ್ಸಿ। ವೇದಾರ್ಥ ಜ್ಞಾನ ಸತ್ಯವೆನಿಸಿ।। ಈ ಧರೆಯೊಳು ಹರಿ ಪರದೈವವೆಂದು। ಸಾಧಿಸಿ ಉದ್ದಂಡನಾದ ಗುರುತಿಲಕ।।2।। ಅಕ್ಷೋಭ್ಯತೀರ್ಥರ ಕರದಿಂದ ಜನಿಸಿ। ಮೋಕ್ಷಕ್ಕೆ ಜಯಪತ್ರಿಕೆಯ ಕೊಡಿಸಿ।। ಪಕ್ಷಿವಾಹನ ಸಿರಿ ವಿಜಯ ವಿಠಲನ್ನ। ಈಕ್ಷಿಸುವದಕೆ ಉಪದೇಶ ಕೊಡುವ ಖುಷಿ।।3।।

**ಜಯತೀರ್ಥ ಗುರುರಾಯಾ ಕವಿಗೇಯ** **ರಾಗ: ಮಧ್ಯಮಾವತಿ-ಆದಿತಾಳ**

ಜಯತೀರ್ಥ ಗುರುರಾಯಾ ಕವಿಗೇಯ। ಪಾದದ್ವಯಕಭಿನಮಿಸುವೆನು ಶುಭಕಾಯ।।ಪ।। ಎಂದೆಂದು ನಿನ್ನ ಪಾದವೊಂದಿದವರ ಪಾದ। ದ್ವಂದ್ವಾರಾಧಕರ ಸಂಬಂಧಿಗರಾನೆಂದು ಪಾಲಿಸೋ ಕಾರುಣ್ಯಸಾಗರ। ಮಂದನು ನಾ ಕರ್ಮಂದಿಗಳರಸನೆ। ಮುಕುಂದನ ತೋರ್ಮನ ಮಂದಿರದೊಳು ನೀ।।1।। ಹರಿಪಾದಾಂಬುಜಾ ಸಕ್ತ ಭಕ್ತಜನ। ಪರಿಪಾಲಿಪ ಸಮರ್ಥ ಅಕ್ಷೋಭ್ಯತೀರ್ಥ। ಕರಕಮಲಸಂಜಾತಾ ಆನಂದದಾತಾ। ಪರಮಹಂಸಕುಲವರನೆ ವಂದಿಸು ವೆನು। ಕರುಣದಿಂದಲಿ ಎನಗರುಪಸುತತ್ವ।।2।। ಕಾಮಿತ ಫಲದಾತಾ ಜಗನ್ನಾಥ ವಿಠಲನ ಪರಮದೂತ ಪ್ರಖ್ಯಾತ। ತಾಮಸಮತಿಕಳೆದೀ ಮಹೀಸುರರಾ। ಮಹಾಮಹೀತರ ಮಾಡಿದೆ ಮುನಿವರ್ಯ।।3।।

**ಜಯಜಯ ಜಯಜಯ ಜಯರಾಯಾ** **ರಾಗ: ಆರಭಿ-ಆದಿತಾಳ**

ಜಯಜಯ ಜಯಜಯ ಜಯರಾಯಾ। ದಯದಿ ಪಾಲಿಸೋ ಮಹರಾಯಾ ನೀ। ದಯದಿಂ ಪಾಲಿಸೋ ಮಹರಾಯಾ।।ಪ।। ಪ್ರತಿಜನ್ಮದಿ ತ್ವಚ್ಚರಣದಲಿ। ಸದ್ಗತಿಯನಿತ್ತು ಕಾಯೋ ಕರುಣದಲಿ। ಸನ್ಮತಿವಂತರಲಿದೋ ನಿರುತದಲಿ।। ಅತಿಬಲ ಹೃದ್ಗತ ತಡೆವಳಿದು। ಉನ್ನತಿಯನ ಕೊಡು ಸನ್ನುತ ಮಹಮಹಿಮಾ।।1।। ಅಚ್ಯುತ ಪದಾಂಬುಜ ಭೃಂಗಾ। ನಿನ್ನರ್ಚನೆಯ ಕೊಡೋಕೋಮಲಾಂಗಾ। ತ್ವಚ್ಚಿತೆಯ ತೋರೋ ಗುಣಪಾಂಗಾ। ಪ್ರಚ್ಛೃತದೂಷಣೆ ಸಚ್ಚಿದ್ಭೂಷಣೆ। ಮೆಚ್ಚಿಪೆ ನಾ ನಿನ್ನ ಮುನಿತುಂಗಾ।।2।। ವೃಂದಾರಕ ವೃಂದಾರಾಧ್ಯ। ಅಂದಗಂಧ ಶುಜನಾಬಾಧ್ಯ। ನಂದತೀರ್ಥರ ಮತಬೋದ್ಯ। ಸುಂದರ ತಾಂಡವ ನಿಂದಿಹ ಕೃಷ್ಣನ। ವಂದಿಪ ಸದ್ಗುರು ನಿರವದ್ಯ।।3।।

## ಶ್ರೀ ವ್ಯಾಸರಾಯರು

**ಜಯಜಯ ವೈಷ್ಣವ ಪಯನಿಧಿ ಚಂದ್ರಗೆ**

ಜಯಜಯ ವೈಷ್ಣವ ಪಯನಿಧಿ ಚಂದ್ರಗೆ। ಜಯಜಯ ವ್ಯಾಸಯತೀಂದ್ರರಿಗೆ।।ಪ।। ಜಯಜಯ ವರ ಕರ್ಣಾಟಕ ಪತಿಗೆ। ಜಯ ಸಿಂಹಾಸನವೇರಿದಗೆ।।ಅ.ಪ।।ನಾಕು ಶಾಸ್ತ್ರಗಳ ಪಾರಂಗತರಿಗೆ। ಕಾಕುಮತಗಳನು ತುಳಿದವಗೇ। ಆ ಕಮಲಾಪತಿ ಭಕುತವರೇಣ್ಯಗೆ। ಶ್ರೀಕರ ಚಂದ್ರಿಕಾ ಚಾರ್ಯರಿಗೆ।।1।। ಹನುಮನ ಭಾಷ್ಯವ ಅಣಿಮಾಡಿದಗೆ। ಹನುಮಗೆ ಭವನಗಳನು ಕಟ್ಟಿದಗೆ। ಹನುಮನ ಯಂತ್ರದಿ ಬಿಗಿದಪ್ಪಿದಗೆ। ಮುನಿತ್ರಯದಲಿ ಸೇರಿದ ದೊರೆಗೆ।।2।। ಮಾಯಾವಾದಗಳನು ಗೆಲಿದವಗೆ। ಸ್ವೀಯಮತವ ಸ್ಥಾಪಿಸಿದವಗೆ। ನ್ಯಾಯಾಮೃತಧಾರೆಯು ಅಭಿಷೇಕದಿ। ಆ ಯದುಪತಿಯನು ಕುಣಿಸಿದಗೆ।।3।। ಚಕ್ರಧರನ ಸುಳಗಳ ತಿಳಿದವಗೆ। ಮಿಕ್ಕಮತಗಳನು ಅಳಿದವಗೆ। ವಕ್ರಯುಕುತಿಗಳನು ತುಕ್ಕಡಗೈಯ್ಯುವ। ತರ್ಕ ತಾಂಡವದಿ ನಲಿದವಗೆ।।4।। ಕೃಷ್ಣದೇವರಾಯನ ಕುಲಪತಿಗೆ। ಕಷ್ಟದ ಕುಹಯೋಗವ

ಕೊಂದವಗೆ। ಶಿಷ್ಯಜನಗಳಿಗೆ ಇಷ್ಟಾರ್ಥಗಳನು ವೃಷ್ಟಿಯ ಗೈವ ಪ್ರಸನ್ನರಿಗೆ॥5॥

**ಇದಿರದಾವನು ನಿನಗೆ ವ್ಯಾಸಮುನಿರಾಯಾ** **ರಾಗ: ನಾಟ-ಅಟ್ಟತಾಳ**

ಇದಿರದಾವನು ನಿನಗೆ ವ್ಯಾಸಮುನಿರಾಯಾ। ಪದುಮನಾಭನ ದಾಸ ಪರಮ ಉಲ್ಲಾಸ॥ಪ॥ ವಾದಿ ತಿಮಿರ ಮಾರ್ತಾಂಡನೆಂದೆನಿಸಿದಾ ವಾದಿಶರಭಭೇರುಂಡ ವ್ಯಾಸಮುನಿರಾಯಾ॥1॥ ಯತಿಗಳೊಳು ನಿಮ್ಮಂಥ ಪ್ರತಿಭೆಯುಳ್ಳವರ। ನಾ-ಪ್ರತಿಗಾಣೆ ಕ್ಷಿತಿಯೊಳಗೆ ಯತಿರಾಯಾ॥2॥ ಹಮ್ಮನಳಿದು ಸಿರಿಪತಿ ರಂಗವಿಠಲನ। ಸುಮ್ಮಾನದಿಂ ಸೇವಿಪ ವ್ಯಾಸಮುನಿರಾಯಾ॥3॥

**ವ್ಯಾಸರಾಯರ ಬೇಸರದೆ ನೆನೆದಾಸೆ** **ರಾಗ: ಕಾನಾಡಾ-ಅಟ್ಟತಾಳ**

ವ್ಯಾಸರಾಯರ ಬೇಸರದೆ ನೆನೆದಾಸೆ ಪೂರೈಸಿಕೊಂಬೆನಾ ॥ಪ॥ ದಾಸರಾಯರಿಗಾಸು ಮಂತ್ರೋಪದೇಶವ ಮಾಡಿದ। ದೇಶದೊಳಗೆ ವಿಶೇಷ ಮೆರೆದು ಅಶೇಷ ಜನರನುದ್ಧರಿಸಿದ ॥1॥ ವಾಸುದೇವನ ದ್ವೇಷಿಗಳ ಅನಾಯಾಸದಿ ನಿರಾಕರಿಸಿದ। ದಾಸವರ್ಗವ ಪೋಷಿಸಲು ನಿರ್ದೋಷ ಗ್ರಂಥ ವಿರಚಿಸಿದ॥2॥ ಭಾಸುರಚರಿತ ಭೇಶುಭಾಸ ಸುಕಾಷಾಯಾಂಬರ ಧರಿಸಿದ। ವೀಶವಾಹನ ಕ್ಲೇಶಹ ಪ್ರಾಣೇಶವಿಠಲನ ನೊಲಿಸಿದ॥3॥

**ನವಬೃಂದಾವನದಿ ವಿರಾಜಿಪ**

ನವಬೃಂದಾವನದಿ ವಿರಾಜಿಪ ಯತಿಪವಿಧರನ್ಯಾರೇ ಪೇಳಮ್ಮಾ॥ಪ॥ ಕವಿಜನನಾಯಕ ಪವನಮತ ಸಮುದ್ಭವ ಅಭಿನವವ್ಯಾಸಾರ್ಯ ಕಾಣಮ್ಮಾ॥ಅ.ಪ.॥ ಭೂಸಾಮ್ರಾಜ್ಯ ಮುದ್ರಾಸೀನದಿ ಬಹು। ಕ್ಲೇಶಿತ ಕೃಷ್ಣಜನೇಶನಪೊರೆದು ಸಿಂ। ಹಾಸನವೇರಿದನ್ಯಾರಮ್ಮಾ। ದೇಶಾಡಳಿತ ಸದ್ವ್ಯಾಸಂಗದಿ ದಿಗ್ದೇಶದಿ ಮೆರೆದವನ್ಯಾರಮ್ಮಾ। ಭಾಸಮಾನನಿವ ನ್ಯಾರಮ್ಮಾ। ಭಾಸುರಮಂತ್ರೋಪದೇಶದಿಂದಭಕ್ತ। ರಾಸೆಪೂರೈಸುವ ವ್ಯಾಸತೀರ್ಥರೇ॥1॥ ಫಲಮಂತ್ರಾಕ್ಷತೆ ಒಲಿದರೆ ಹಾಲಾ। ಹಲಕಲಿಕುಲಕಿವನ್ಯಾರಮ್ಮಾ। ಜಲಧಿ ಬಿಗಿದ ಬುಧಜಲಜಾರ್ಕವಿದ। ಗ್ದ ಲಲಾಮನ್ಯಾರಾಮ್ಮಾ॥ ಖಳಹಿರಣ್ಯಜ ಲಂಕಾಪಾಲನನುಜ ನೃಪ। ಬಾಲ್ಹಿಕಾನಿವನ್ಯಾರಮ್ಮಾ। ಇಳೆಯೊಳು ಮುಂದೆ ಮಂತ್ರಾಲಯದೊಳು ಯತಿ। ಕುಲತಿಲಕ ನೆನಿಸಿದಾ ಫಲಪ್ರದನಮ್ಮಾ॥2॥ ಚಂದ್ರಿಕಾರ್ಯ ವಿಜಯೀಂದ್ರ ಸ್ವಾದೀಶ ಪು।ರಂದರಾರ್ಯರ ಗುರುವ್ಯಾರಮ್ಮಾ। ಅಂದಣಗಜ ಧ್ವಜ ಕುಂದಣ ಬಿರುದುಗ। ಳಿಂದೆಸೆವನು ಇವನ್ಯಾರಮ್ಮಾ॥ ನಂದತೀರ್ಥರಮತ ಸಿಂಧುಶಶಾಂಕ ಮಾ। ಯಾಂಧದಿನೇಶನ್ಯಾರಮ್ಮಾ। ತಂದೆವೆಂಕಟೇಶ ವಿಠ್ಠಲ ನೊಲುಮೆಯೊಳು। ಬಂಧವಳಿದವ್ಯಾಸೇಂದ್ರ ಕಾಣಮ್ಮಾ॥3॥

## ಶ್ರೀ ಪಾದರಾಜರು

**ಮಹಿಮೆ ಸಾಲದೆ ಇಷ್ಟೇ ಮಹಿಮೆ** **ರಾಗ: ಆರಭಿ-ಛಾಪುತಾಳ**

ಮಹಿಮೆ ಸಾಲದೆ ಇಷ್ಟೇ ಮಹಿಮೆ ಸಾಲದೆ॥ಪ॥ ಅಹಿಶಯನನ ಒಲುಮೆಯಿಂದ ಮಹಿಯೊಳೆಮ್ಮ। ಶ್ರೀಪಾದರಾಜರ॥ಅ.ಪ॥ ಮುತ್ತಿನ ಕವಚ ಮೇಲ್ ಕುಲಾವಿ ನವ ರತ್ನಕೆತ್ತಿದ ಕರ್ಣಕುಂಡಲ। ಕತ್ತುರಿತಿಲಕ ಶ್ರೀಗಂಧಲೇಪನ ವಿಸ್ತಾರದಿಂದ ಮೆರೆದು ಬರುವ॥1॥ ವಿಪ್ರಹತ್ಯ ದೋಷ ಬರಲು ಕ್ಷಿಪ್ರಶಂಖೋದಕದಿ ಕಳೆಯೆ। ಅಪ್ರಬುದ್ಧರು ದೂಷಿಸೆ ಗೇರೆಣ್ಣೆ ಕಪ್ಪುವಸನ ಹಸನ ಮಾಡಿದ॥2॥ ಹರಿಗೆ ಸಮರ್ಪಿಸಿದ ನಾನಾಪರಿಯ ಶಾಕಂಗಳನು ಭುಂಜಿಸೆ। ನರರು ನಗಲು ಕೃಷ್ಣನ ಪರಮ ಕರುಣದಿಂದ ಹಸಿಯ ಮಾಡಿದ॥3॥

**ನೆನೆದು ಬದುಕಿರೋ ಸತತ** **ರಾಗ: ಪಂತುವರಾಳಿ-ರೂಪಕ**

ನೆನೆದು ಬದುಕಿರೋ ಸತತ ನೆನೆದು ಬದುಕಿರೋ॥ಪ॥ ನೆನೆದು ಬದುಕಿ ಸುಜನರೆಲ್ಲ ಘನಗುಣಾಂಬುಧಿ ಶ್ರೀಪಾದರಾಯರ॥ಅ.ಪ.॥ ಇತರ ಧ್ಯಾನವೆಲ್ಲವಳಿದು ಅತಿಶಯದಿ ವಿರಕ್ತಿ ಬಲಿದು। ಮತ ವಿಶೇಷವೆನಿಪ ಮಧ್ವ

ಮತಾಂಬುನಿಧಿಗೆ ಪೂರ್ಣಚಂದ್ರನ॥1॥ ಅಮಿತಪುಣ್ಯ ಅಗ್ರಗಣ್ಯನ ವಿಮತಹರನ ವಿನಯಪಠಣ। ದ್ಯುಮಣಿತೇಜನ ದುರಿತದೂರನ ಶಮದಮಾದಿ ಗುಣಸಮುದ್ರನ॥2॥ ಹೀನಕುಮತಮಾನಭಂಗನ ಸೂನಶರನ ಗೆಲಿದ ಘನ್ನನ। ದಾನಕರ್ಣನ ದಯಾರ್ಣವನ ಜ್ಞಾನಪೂರಿತ ಶುಭಚರಿತನ॥3॥ ವಾದಿಕುಂಜರಪಂಚಮುಖನ ಸಾಧುಸಜ್ಜನ ಕಲ್ಪವೃಕ್ಷನ। ವೇದಶಾಸ್ತ್ರಪುರಾಣದಲ್ಲಿ ಆದಿಶೇಷನ ಪೋಲ್ವ ಮುನಿಯ॥4॥ ವನಜನೇತ್ರನ ಕೃಷ್ಣನ ಪ್ರಿಯನ ಕನಕವರ್ಣತೀರ್ಥರ ಸುತನ। ಜನಸಮೂಹಸನ್ನುತ ಪರಮ ವನಧಿಗಂಭೀರ ಶ್ರೀಪಾದರಾಯರ॥5॥

**ವಾದಿಗಜ ಮಸ್ತಕಾಂಕುಶ** **ರಾಗ: ಪೂರ್ವಿಕಲ್ಯಾಣಿ-ಏಕತಾಳ**

ವಾದಿಗಜ ಮಸ್ತಕಾಂಕುಶ ಸುಜನ ಬುಧಗೇಯ। ಮೇದಿನೀ ಸುರವಂದ್ಯ ಶ್ರೀಪಾದರಾಯ॥ಪ॥ ಸಕಲ ಶಾಸ್ತ್ರ ಕಲಾಪ ಸನ್ಯಾಸ ಕುಲದೀಪ। ಸಕಲ ಸತ್ಯ ಸ್ಥಾಪ ಸುಜ್ಞಾನದೀಪ॥ ಪ್ರಕಟಪಾವನರೂಪ। ಅರಿಕುಜನಮತ ಲೋಪ। ನಿಕಟ ವರ್ಜಿತತಾಪ ಕೀರ್ತಿ ಪ್ರತಾಪಾ॥1॥ ಹರಿಪಾದಾಂಬುಜ ಭೃಂಗ ಪರಮತಾಹಿವಿಹಂಗ। ಪರಮ ಸುಗುಣಾಂತರಂಗ। ಭವದುರಿತಭಂಗ। ಶರಣಕೀರ್ತಿತರಂಗ ಶತ್ರುತಿಮಿರಪತಂಗ। ಶರಣು ಶುಭಚರಿತಾಂಗ ಷಟ್ ಶಾಸ್ತ್ರಸಂಗ॥2॥ ಸಿರಿಕೃಷ್ಣ ದಿವ್ಯ ಪಾದಾಬ್ಜ ಚಿಂತಾಲೋಲ। ವರ ಹೇಮ ವರ್ಣ ಮುನಿಪತಿಯ ಸುಕುಮಾರಾ। ಗುರುತಿಲಕ ಶ್ರೀಪಾದರಾಯಾ ಅಮಿತೋದ್ಧಾರ। ಶರಣಜನ ಸುರಧೇನು ಭಕ್ತಮಂದಾರಾ॥3॥

# ಗುರು

## ಗುರುವಿಗೆ ನಮಿಸುವೆನು

ಗುರುವಿಗೆ ನಮಿಸುವೆನು। ಸಲಹುವ॥ಪ॥ ಭಕ್ತಿಯ ಒಲಿಸೀ। ವಿರಕ್ತಿಯ ಬೆಳೆಸೀ। ಮುಕ್ತಿಗೆ ನಲಿಸೀ। ಯುಕಿಗಳನೇ ಕಳಿಸಿ॥1॥ ಅವಿದ್ಯ ಬಿಡಿಸಿ। ಸುವಿದ್ಯೆವಿಡಿಸಿ। ಭವ ಭಯಗಡಿಸಿ। ವಿವೇಕ ವಡಗೂಡಿಸೀ॥2॥ ಗುರುಮಹಿಪತಿ। ಶರಣರ ಸಾರ್ಥಿ। ತರಳಗ ಸ್ಫೂರ್ತಿ ಕರುಣಿಸಿ ಘನಮತಿ॥3॥

## ಗುರುದೈವದೊಲವೆನಗೆ ಬಲವೆ ಬಲವು

ಗುರುದೈವದೊಲವೆನಗೆ ಬಲವೆ ಬಲವು। ಏರಿ ಬಿನಗು ದೈವದ ಬಲವು ಯಾತಕೆ ಹಲವು॥ಪ॥ ಗುರುನಯನ ದೊಲವೆನಗೆ ನವನಿಧಾನದ ಬಲವು। ಗುರುಅಭಯದೊಲುವೆ ನವಗ್ರಹದ ಒಲವು। ಗುರು ಅನುಗ್ರಹದೊಲವು ಎನಗೆ ಅನುದಿನ ಬಲವು। ಗುರು ಒಲುಮೆ ಎನಗೆ ಸಿರಿ ಸಕಲಬಲವು॥1॥ ಗುರು ದಯದೊಲವೆನಗೆ ತಾಯಿ ತಂದೆಯ ಬಲವು। ಗುರು ಕರುಣದೊಲವೆನಗೆ ಬಾಹುಬಲವು। ಗುರು ಬೋಧದೊಲವೆನಗೆ ಬಂಧುಗಳಗದ ಬಲವು। ಗುರುಧರ್ಮದೊಲವೆನಗೆ ಸರ್ವಬಲವು॥2॥ ಗುರು ಪ್ರಭೆದೊಲವೆನಗೆ ಅನುಭವಾಶ್ರಯ ಬಲವು। ಗುರು ಜ್ಞಾನದೊಲವು ಘನ ದೈವ ಬಲವು। ಗುರುನಾಮದೊಲವೆನಗೆ ಪಕ್ಷವಾಗಿ ಹ್ಯ ಬಲವು। ತರಳ ಮಹಿಪತಿ ಸ್ವಾಮಿ ಬಲವೇ ಬಲವು॥3॥

## ಗುರುಮೂರ್ತಿಯ ಚರಣವ ನೋಡಿ

ಗುರುಮೂರ್ತಿಯ ಚರಣವ ನೋಡಿ। ಮುಡಿ। ವೆರಗಿ ವರಗಳ ಬೇಡಿ॥ಪ॥ ಜನುಮ ಜನುಮದಿಂದೆಳೆದಘ ಕುಲಗಳ। ವನಕ ಸತೇಜ ಕುಠಾರವೆನಿಪ॥1॥ ತನ್ನ ತಾಮರೆವ ಅವಿದ್ಯದಾ ಕತ್ತಲೆ। ಯನ್ನಡಗಿಪ ವಾಸರ ಮಣಿಯನೆ॥2॥ ನಿರುತದಿ ತನುಮನ ವಚನದಿ ನಂಬಿಹ। ಶರಣಜನಾಂಬುಧಿ ಶೀತಕಿರಣಾ॥3॥ ಶ್ರವಣ ಮನನ ಸುಜ್ಞಾನದ ಬೆಳೆಗಳ। ಹವಣದೋರುವ ದಯ ಜಲಧಾರಾ॥4॥ ತಂದೆ ಮಹಿಪತಿ ನಂದನುದ್ಧರಿಸುತಾ। ನಂದದ ಪದವನು ಛಂದದಿತ್ತಿಹ॥5॥

## ಗುರು ಸಂತತಿ/ಪರಂಪರೆ

### ಶ್ರೀಪತಿಯ ನಾಭಿ ಕಮಲದಿಂದ (ಉಗಾಭೋಗ)

ಶ್ರೀಪತಿಯ ನಾಭಿ ಕಮಲದಿಂದ ಅಜ ಜನಿಸಿದನು। ಅಜನ ಪುತ್ರರೇ ಸನಕಾದಿಗಳು। ಸನಕಾದಿಗಳ ಶಿಷ್ಯರೇ ದೂರ್ವಾಸರು। ದೂರ್ವಾಸರ ಶಿಷ್ಯರೇ ಪರತೀರ್ಥರು। ಪರತೀರ್ಥರ ಶಿಷ್ಯರೇ ಸತ್ಯಪ್ರಜ್ಞರು। ಸತ್ಯಪ್ರಜ್ಞರ ಶಿಷ್ಯರೇ ಪ್ರಾಜ್ಞಾತೀರ್ಥರು। ಪ್ರಾಜ್ಞಾತೀರ್ಥರ ಶಿಷ್ಯರೇ ಅಚ್ಯುತಪ್ರೇಕ್ಷರು। ಅಚ್ಯುತಪ್ರೇಕ್ಷರ ಕರಕಮಲ ಸಂಜಾತರೇ ಮಹಾ ಭಾಷ್ಯಕಾರರು। ಮಹಾಭಾಷ್ಯಕಾರರೇ ಗುರುಮುಖ್ಯಪ್ರಾಣರು। ಗುರು ಮುಖ್ಯಪ್ರಾಣರ ಪತಿ ನಮ್ಮ ಪುರಂದರವಿಠಲ ದಾಸರಿಗೆ ನಮೋ ನಮಃ॥

### ಶ್ರೀ ಗುರುಸಂತತಿಗೆ ನಮೋ ನಮೋ

ಶ್ರೀ ಗುರುಸಂತತಿಗೆ ನಮೋ ನಮೋ ಶ್ರೀ। ಹರಿಶರಣರಿಗೆ ನಮೋ ನಮೋ॥ಪ॥ ಪರಮ ರಹಸ್ಯಾರ್ಥಗಳ ತಿಳಿದಿರುವ। ಧರಣೀಸುರರಿಗೆ ನಮೋ ನಮೋ॥ಅ.ಪ॥। ವಿಜಯ ರಾಮದಾಸ ಗುರುವೆ ನಮೋ ನಮೋ। ಭಜಕಜನರಸುರತರುವೆ ನಮೋ। ವೃಜಿನ ಕಳೆವ ಭಾಗ್ಯ ನಿಧಿದಾಸ ನಮೋ। ವಂದೇ ಸುಪ್ರೇಮದಾಸ ನಮೋ॥1॥ ತಿರುಮಲಾಖ್ಯದಾಸರಿಗೆ ನಮೋ ನಮ। ಗುರುಗೋಪಾಲರಾಯರಿಗೆ ನಮೋ। ವರ ಭಾಗಣ್ಣ ವಿಜಯರಾಯರಿಗೆ ನಮೋ। ಪುರಂದರಾಖ್ಯ ಸುರಮುನಿಗೆ। ನಮೋ॥2॥ ವ್ಯಾಸಾಭಿಧಮೌನೀಶನಮೋ। ಹರಿ। ದಾಸಶ್ರೀಪಾದ ರಾಯರಿಗೆ ನಮೋ। ಭೂಸುರ ಪ್ರಿಯಹನುಮತೇ ನಮೋ। ಸೀತೇಶ ಶ್ರೀಗುರುರಾಮವಿಠಲ ನಮೋ॥3॥

### ದಾಸವರ್ಯರಿಗೊಂದಿಪೆ — ರಾಗ: ಮೋಹನಕಲ್ಯಾಣಿ-ಆಟ್ಟತಾಳ

ದಾಸವರ್ಯರಿಗೊಂದಿಪೆ॥ಪ॥ ದಾಸವರ್ಯರಪಾದಕ್ಕೆರಗಿ ಜನ್ಮಾಂತರದ। ದೋಷವ ಪರಿಹರಿಸಿಕೊಂಬೆ ॥ಅ.ಪ॥ ನಾರದಮುನಿ ಹರಿಯಾಜ್ಞೆಯಿಂದಲಿ ಪುರಂದರದಾಸರಾಗಿ ಜನಿಸಿದ। ನಾರಾಯಣ ದಿವ್ಯನಾಮದ ಮಹಿಮೆಯ। ಮೂರುಲೋಕಗಳಲ್ಲಿ ಅರುಹಿದ ॥1॥ ಭಜಿಸುವ ಭಕುತರ ಅಗಣಿತ ದೋಷವ। ನಿಜವಾಗಿ ಪರಿಹರಿಸುವಂಥಾ ॥ದಾಸ॥ ಸುಜನ ಪೋಷಕ ದುಷ್ಟಕುಜನ ಕುಠಾರಶ್ರೀ। ವಿಜಯರಾಯಾರ ಪಾದಕ್ಕೆರಗುವೆ॥2॥ ಕೋಪ ರಹಿತ ಭಕ್ತಪಾಪ ವಿದೂರಕ। ಶ್ರೀಪತಿ ಪಾದ ಕಮಲ ಭೃಂಗ॥ದಾಸ॥ ತಾಪಸ್ತೋಮ ಭವತಾಪ ನಿವಾರಕ। ಗೋಪಾಲ ದಾಸರಿಗೆರಗುವೆ॥3॥ ಧರೆಯ ಸುರರ ಉದ್ಧರಿಸಲೋಗ ದಿವ್ಯ। ಹರಿ ಕಥಾಮೃತಸಾರ ಗ್ರಂಥವ॥ದಾಸ॥ ವಿರಚಿಸುತಾಜ್ಞಾನ ಪರಿಹರಿಸುವಂಥಾ। ಹರಿಬಕ್ತಾಗ್ರಣಿ ಶ್ರೀ ಜಗನ್ನಾಥ॥ದಾಸ॥4॥ ಧರೆಯೊಳು ಹರಿಲೀಲಾಮೃತ ವೃಷ್ಟಿಗರೆಯಲು। ಪರಿಪರಿಕಥೆಗಳ ರಚಿಸಿದ॥ದಾಸ॥ ವರದೇಂದ್ರ ಮುನಿಗಳ ಪಾದ ಸರಸ ಭೃಂಗ। ಪರನು ಸುಚರಿತ ಶ್ರೀಪ್ರಾಣೇಶ ॥ದಾಸ॥5॥ಹರಿಭಕ್ತಿ ಮಾರ್ಗವ ಪರಿಪರಿ ಶಿಷ್ಯರಿ। ಗರುಹಿ ಕರುಣದಿಂದುದ್ಧರಿಸಿದ॥ದಾಸ॥ ಪರಮತ ತಿಮಿರಕ್ಕೆ ತರಣಿ ಸ್ವರೂಪ ಶ್ರೀ। ಗುರು ಪ್ರಾಣೇಶರಾಯ ರಿಗೆರಗುವೆ॥ದಾಸ॥6॥ ಗುರುಪಾದಸೇವೆಯ ಪರಿಪರಿಗೈದು। ಈ ಧರೆಯೊಳುಧನ್ಯ ರೆಂದೆನಿಸಿದ॥ದಾಸ॥ ಹರಿದಾಸ ಕುಲರತ್ನ ಸರುವ ಸದ್ಗುಣಪೂರ್ವ।ವರಶ್ರೀಶ ಪ್ರಾಣೇಶ ದಾಸಾರ್ಯರಿಗೆರಗುವೆ॥7॥ ಗುರು ಪ್ರಾಣೇಶಕರ ಸರಸಿಜ ಸಂಜಾತ। ಪರಮಭಾಗವತರೆನಿಸಿದ॥ದಾಸ॥ ಮರುತಮತದ ತತ್ವರಿದಂಥ ಸುಖದ ಸುಂ।ದರ ವಿಠಲ ಮೋದವಿಠಲರೆಂಬ॥ದಾಸ॥8॥ ಭೂಮಿಯೊಳು ವರದೇಶ ವಿಠಲನ ನಿಜ ಭಕ್ತ। ಸ್ತೋಮಕ್ಕೆ ಶಿರಬಾಗಿ ನಮಿಸುವೆ॥ದಾಸ॥ ಆ ಮಹಾತ್ಮರ ಪಾದರಜದೊಳಿನ್ನನು ದೇವ। ನೇಮದಿಂದಲಿ ಹೊರಳಾಡಿಸೋ॥9॥

### ಗುರುವಂಶಕೆ ನಮೋ ಎಂಬೆ ನಮ್ಮ — ರಾಗ: ಪಾಡಿ-ಆದಿತಾಳ(ಕಹರವಾ)

ಗುರುವಂಶಕೆ ನಮೋ ಎಂಬೆ ನಮ್ಮ। ಮರುತಮತಾಬ್ಧಿಗೆ ನಮೋ ಎಂಬೆ॥ಪ॥ ಶ್ರೀಮದಾನಂದ ತೀರ್ಥ ಪದ್ಮನಾಭರಿಗೆ। ರಾಮದೇವರ ತಂದ ನರಹರಿಗೆ॥ ಕಾಮಿತ ಫಲವೀವ ಮಾಧವ ಕ್ಷೋಭ್ಯರಿಗೆ। ಆ ಮಹಾಮಹಿಮ ಜಯತೀರ್ಥರಾಯರಿಗೆ॥1॥

ವಿದ್ಯಾಧಿರಾಜರಿಗೆ ವಿಜಯ ಕವೀಂದ್ರ ಸು-। ಸದ್ಗುಣ ವಾಗೀಶ ರಾಮಚಂದ್ರರಿಗೆ॥ ವಿದ್ಯಾನಿಧಿ ರಘುನಾಥ ರಘುವರ್ಯ ತೀರ್ಥರಿಗೆ। ಅದ್ವೈತಮತಖಂಡ ರಘೋತ್ತಮರಾಯರಿಗೆ॥2॥ ವೇದವ್ಯಾಸ ವಿದ್ಯಾಧೀಶ ವೇದನಿಧಿಮುನಿಗೆ। ಸಾಧುಜನಪ್ರಿಯ ನಿತ್ಯವ್ರತರಿಗೆ॥ ಮೇದಿನಿಯಲ್ಲಿ ಮೆರೆದ ಸತ್ಯನಿಧಿ ತೀರ್ಥರಿಗೆ। ವಾದಿಗಜಕೆ ಸಿಂಹ ಸತ್ಯನಾಥರಿಗೆ॥3॥ ಯತಿಶ್ರೇಷ್ಠ ಸತ್ಯಾಭಿನವ ತೀರ್ಥರಿಗೆ। ಸತತ ಸಜ್ಜನಪಾಲ ಸತ್ಯಪೂರ್ಣರಿಗೆ॥ ಅತಿಶಯವಾನಂದ ಸತ್ಯವಿಜಯರಿಗೆ। ಮತಉದ್ಧಾರಕ ಶ್ರೀಸತ್ಯ ಪ್ರಿಯರಿಗೆ॥4॥ ಇಂತು ಗುರುಗಳ ಸಂತತಿ ಕೊಂಡಾಡಿ। ಇಂತು ಸಂತಾಪವನರುಹಿ ಬಿಟ್ಟು॥ ಸಂತೋಷಿ ನಾನಾದೆ ವಿಜಯವಿಠ್ಠಲನ್ನ। ಚಿಂತಿಯ ಮಾಡುವೆ ದಾಸರ ದಯದಿಂದ॥5॥

ವ್ಯಾಜದಿ ವಿಜಯ ಸಾಮ್ರಾಜರೆನಿಸಿದ (ದಾಸಸಂತತಿ-ಲಾಲಿ)

ವ್ಯಾಜದಿ ವಿಜಯ ಸಾಮ್ರಾಜರೆನಿಸಿದ ಶ್ರೀವ್ಯಾಸರಾಜರು ಮಲಗ್ಯಾರು ತೂಗಿರೇ॥ ವಾದಿಗಳನು ಯುಕ್ತ ವಾದದಿ ಗೆಲಿದಂಥ। ವಾದಿರಾಜರನ್ನು ತೂಗೀರೇ॥ ಮೇದಿನಿಯೊಳು ಕೃಷ್ಣದ್ವೈಪಾಯನರೆಂಬೋ। ವೇದವ್ಯಾಸಾತ್ಮಜರ ತೂಗೀರೆ॥1॥ ಪರಿಮಳ ರಚಿಸಿದ ವರಹಜತೀರಸ್ಥ। ಗುರುರಾಘವೇಂದ್ರರ ತೂಗೀರೆ॥ ಇರುಳು ಕಾಲದಲ್ಲಿ ತರಣಿಯ ತೋರಿದ। ಗುರುಸತ್ಯಬೋಧರ ತೂಗೀರೇ॥2॥ ಪರಮತಖಂಡನ ನಿರುತದಿ ಮಾಡಿದ ಗುರು ವರದೇಂದ್ರರ ತೂಗಿರೇ॥ ಗುರುಭುವನೇಂದ್ರರ ಕರೆದ ವ್ಯಾಸತತ್ವಯತೀಶ್ವರ ತೂಗೀರೇ॥3॥ ವರಭಾಗವತಸಾರ ಸರಸದಿ ರಚಿಸಿದ। ಗುರುವಿಷ್ಣುತೀರ್ಥರ ತೂಗೀರೇ। ಪರಮಕ್ಷೇತ್ರ ಕೂಡಲಿ ಯೊಳಗಿರುವಂಥ। ಗುರುರಾಘುವರ ತೂಗೀರೇ॥4॥ ಹರಿಯ ಮಹಿಮೆಯನ್ನು ಸರಸದಿ ಕೇಳಿದ ಪುರಂದರ ದಾಸರ ತೂಗೀರೇ॥ ಹರಿ ಸರ್ವೋತ್ತಮನೆಂದು ಸುರಮುನಿಗರುಹಿದ। ಗುರುವಿಜಯ ದಾಸರ ತೂಗೀರೆ॥5॥ ಬನ್ನವ ಬಿಡಿಸಿ ಶಿಷ್ಯನ್ನ ಪಾಲಿಸಿದ। ಬಾಗಣ್ಣದಾಸರ ತೂಗೀರೇ॥ ಘನ್ನ ಹರಿಯಗುಣವರ್ಣಿಸಿದಂಥ। ಜಗನ್ನಾಥ ದಾಸರ ತೂಗೀರೇ॥6॥ ಮಾನಿನಿಯರ ಪ್ರಾಣಪದಕರಾದಪ್ರಾಣೇಶದಾಸರ ತೂಗೀರೇ॥ ವೇಣುಗೋಪಾಲನ್ನ ಗಾನದಿ ಸ್ತುತಿಸಿದ। ಆನಂದ ದಾಸರ ತೂಗೀರೇ॥7॥ ವಾಸ ಆದೀ ಶೀಲಧೀಶನ್ನ ಭಜಿಸಿದ। ಶೇಷದಾಸರನ್ನ ತೂಗೀರೇ। ಶ್ರೀಷಕರ್ಪರ ನರಹರಿ ಕೇಸರಿಗತಿ ಪ್ರಿಯ। ದಾಸೋತ್ತಮರನ್ನ ತೂಗೀರೇ॥8॥

## ಶ್ರೀ ತ್ಯಾಗರಾಜರು

**ಶ್ರೀಮದಾದಿ ತ್ಯಾಗರಾಜ (ಕೀರ್ತನೆ)** **ರಾಗ: ಕಲ್ಯಾಣಿ-ರೂಪಕತಾಳ**

ಶ್ರೀಮದಾದಿ ತ್ಯಾಗರಾಜ ಗುರುವರಂ ನಮಾಮ್ಯಹಂ॥ಪ॥ ಭೂಮಿಜಾರಮಣ ಚರಣ ಕಮಲಭಜನ ದುರಂಧರಂ॥ಅ.ಪ॥ ಸಕಲ ಲೋಕ ಸಂತೋಷದ ಸಂಗೀತ ಸಾಹಿತ್ಯ ಸಾರಭರಿತ ಸುಲಲಿತಪದ ಸಮ್ಮೇಳನ ಸಂಶೋಭಿತ ಸಂಕೀರ್ತನ ಸುರಚನಮುಪಾರ್ಜಿತ ಸತ್ಕೀರ್ತಿಂ ಸುರಮುನಿವರ ಕಾರುಣ್ಯ ಸಂಜಾತ ಸುಜ್ಞಾನಂ ಸಾಮಗಾನಲೋಲ ವಾಸುದೇವಹೃದಯ ಸುಸ್ಥಿತಂ ಸುಜನ ಹೃದಯ ಜಲಧಿಚಂದ್ರ ಮಮಲವಂಶ ಸಂಜಾತಂ॥ಚ॥

ಚಿಟ್ಟೆಸ್ವರಗಳು ರಾಗ: ಕಲ್ಯಾಣಿ-ರೂಪಕತಾಳ

॥ –ಸರಿ । ನಿರಿನಿಪಧನಿಧಮ ॥ ಪಗಮರಿ । ಗಮನಿದ ಧಾ-- ॥ ಮಗರಿನಿ । ಧಾ ರಿಗಮನಿಧಾ॥ ನಿಧಮಗ । ಮಧ ಗರಿನಿದನಿರಿ ॥ ಧಗರಿನಿ । ರೀ ಧರಿನಿಮಧಾ ॥ ಮಗರಿ ಮ। ಗರಿ ನಿಧ ಗಾರಿ ॥ ಸನಿಧರಿ। ೯ ಸನಿದ ಪಧನಿಸ ॥ ರಿ ಮಪದ। ನಿಸರಿಗಮ ಪಧನಿ॥ ಸರಿ

**ಗುರುಲೇಕ ಎಟುವಂಟ (ಕೀರ್ತನೆ)** **ರಾಗ: ಗೌರಿಮನೋಹರಿ-ಝಂಪೆತಾಳ**

ಗುರುಲೇಕ ಎಟುವಂಟಿ ಗುಣಿಕಿ ದೆಲಿಯಗ ಬೋದು॥ಪ॥ ಕರುಕೈನ ಹೃದ್ರೋಗಗಹನಮುನ ಗೊಟ್ಟ ಸದ್ಗುರು॥ಅ.ಪ॥ ತನುವು ಸುತ ಧನದಾರ-ದಾಯಾದಿ ಬಾಂಧವುಲು। ಜನಿಯಿಂಚಿ ಚೆದರು ಜಾ-ಲಿನಿ ಕರುಣತೋ। ಮನಸು ನಂಟಕ ಜೇಯು ಮಂದನುಚು ತತ್ವ ಬೋಧನ ಜೇಸಿ ಕಾಪಾಡ ತ್ಯಾಗರಾಜಾಪ್ತುಡನು॥ಗು...॥ಚರಣ॥

**ಶ್ರೀತ್ಯಾಗರಾಜ ಗುರುವೆ** **ರಾಗ: ರಾಗಮಾಲಿಕೆ**

ಶ್ರೀತ್ಯಾಗರಾಜ ಗುರುವೆ ನಿಮಗೆ ಬಾಗಿ ನಮಿಪೆನು॥ಪ॥ ನಾಡಪೂರ್ವ ಪುಣ್ಯದಿಂದ ಹುಟ್ಟಿಬಂದು ನಾದಯೋಗಿಯಾಗಿ ಮೆರೆದ ಸಂತ। ಶ್ರೀತ್ಯಾಗರಾಜ ಗುರುವೇ ದೇವ। ಕರುಣೆಯಿಂದ ಕಾಯೋ ದೇವ॥ಬಾಗಿನಮಿಪೆನು॥1॥ ವೇದಮಂತ್ರ ಎಲ್ಲ ಕಲಿತು ನಾದಬ್ರಹ್ಮ। ವೇದ ಬ್ರಹ್ಮ ಬೇರೆ ಇಲ್ಲ ರಾಮಬ್ರಹ್ಮ ಅವನೇ ಎಲ್ಲ। ಎಂದಾಡಿ ಪಾಡಿ ಮುಕ್ತರಾದ। ತ್ಯಾಗರಾಜ ಗುರುವೇ ನಿಮಗೆ ಬಾಗಿ ನಮಿಪೆನು॥2॥ ಸಪ್ತಸ್ವರದ ಸೇತು ಕಟ್ಟಿ ರಾಗಭಾವ ಭಕ್ತಿಯಿಂದ ಬಿಗಿದು। ಅದನು ತಾಳದಿಂದ ಸುತ್ತುವರಿದು ಪರದ ಸುತ್ತ। ಲಯವನಿಟ್ಟು ಜೀವನ್ಮುಕ್ತರಾದ ಗುರುವೆ। ನಿಮಗೆ ಬಾಗಿ ನಮಿಪೆನು॥3॥

**ನೀ ಚಿತ್ತಮು ನಿಶ್ಚಲಮು ನಿರ್ಮಲ ಮನಿ (ಕೀರ್ತನೆ)**

ನೀ ಚಿತ್ತಮು ನಿಶ್ಚಲಮು॥ಪ॥ ನಿರ್ಮಲ ಮನಿ ನಿನ್ನೆ ನಮ್ಮಿ ನಾನು ॥ಅ.ಪ.॥ ನಾ ಚಿತ್ತಮು ವಂಚಿನ ಚಂಚಲ ಮನಿ। ನನು ವಿಡನಾಡುಕುಮಿ ಶ್ರೀರಾಮ ॥1॥ ಗುರುವು ಚಿಲ್ಲ ಕಾಂಜ। ಗುರುವೇ ಭ್ರಮರಮು। ಗುರುಡೇ ಭಾಸ್ಕರಡು। ಗುರುಡೇ ಭದ್ರುಡು। ಗುರುಡೇ ಉತ್ತಮ ಗತಿ। ಗುರುವು ನೀ ವನು ಕೊಂಟಿ। ಧರನು ದಾಸುನಿ ಬ್ರೋವ ತ್ಯಾಗರಾಜನುತ॥2॥

**ನಾರದ ಗುರುಸ್ವಾಮಿ (ಕೀರ್ತನೆ)** **ರಾಗ: ದರ್ಬಾರು-ಆದಿತಾಳ**

ನಾರದ ಗುರುಸ್ವಾಮಿ ಯಿಕನೈನ ನನ್ನಾದರಿಂಪ ವೇಮಿ ಈ ಕರವೇಮಿ॥ಪ॥ ಸಾರೆಕು ಸಂಗೀತ ಯೋಗ ನೈಗಮ ಪಾರಂಗತುಡೈನ ಪರಮ ಪಾವನ॥ಅ.ಪ॥ ಇತಿಹಾಸ ಪುರಾಣಾಗಮ ಚರಿತಮು ಲೆವರಿವಲ್ಲ ಗಲಿಗೆ। ಪತಿನಿ ದಾನಮೀವ ಬುದ್ಧಿ ಸತ್ಯಭಾಮ ಕೆಟುಲ ಗಲಿಗೆದ್ಯುತಿಜಿತ ಶರದಾಭ್ರ ನಿನು ವಿನಾ ಮುನಿಯತುಲ ಕೆವರು ಗಲಿಗೆ। ಕ್ಷಿತಿನಿ ತ್ಯಾಗರಾಜನುತ ನಮ್ಮಿತಿಚಿಂತ ದೀರ್ಚಿ ಪ್ರಹ್ಲಾದುನಿ ಬ್ರೋಚಿನ॥ನಾ....॥ಚರಣ॥

## ದೀಕ್ಷಿತರು

**ಶ್ರೀ ಗುರುಗುಹ ಮೂರ್ತೇ**

ಶ್ರೀ ಗುರುಗುಹ ಮೂರ್ತೇ। ಚಿಚ್ಛಕ್ತಿ ಸ್ಫೂರ್ತೇ। ಶಿಷ್ಯ ಜನಾವನ ಕೀರ್ತೇಸಮುಹೂರ್ತೇ ಜಯ॥ಪ॥ ಯೋಗಿನೀ ಹೃದಯ। ಪ್ರಕಾಶ ಚಿತ್ತವೃತ್ತೇ। ಯುಗಪದ್ಭೋಗ ಯೋಗ। ಪ್ರಧಾನ ನಿಪುಣ ಶಕ್ತೇ। ಆಗಮ ರಹಸ್ಯ। ತಾತ್ವಾನು ಸಂಧಾನಯುಕ್ತೆ। ಆನಂದಾನುರಕ್ತೇ। ಅತಿವಿರಕ್ತೇ। ಜಯಜಯ॥ಅ.ಪ॥ ಆತ್ಮೇಶ್ವರ ಜೀವಭೇದಾವರಣ ನಿವೃತ್ತೇ। ಆಶ್ರಿತ ಶಿಷ್ಯಾನುಗ್ರಹ ಕಾರಣ ಪ್ರವೃತ್ತೇ। ಆತ್ಮ ತತ್ವಾದಿ ಶೋಧನ ಸಾಧನ ಸಂಪತ್ತೇ। ಆರಕ್ತ ಶ್ವೇತ ಮಿಶ್ರ ಚರಣ ಪ್ರವೃತ್ತೇ। ಆತ್ಮ ಕೋಟಿ ಭಕ್ತೇ ಅನಾದಿ ಮಾಯೋತ್ಪತ್ತೇ। ಆತ್ಮಾನುಭವಸಾರ ಸಂತೃಪ್ತೇ ನಿರ್ಮುಕ್ತೇ। ಆತ್ಮೋದಯ ರವಿಚಂದ್ರಿಕಾ ಸಂದೀಪ್ತೇ ಪರಮಾತ್ಮ। ಶ್ರೀ ಚಿದಾನಂದನಾಥ ನಮಸ್ತೇ ಜಯಜಯ॥1॥

**ಶ್ರೀಗುರುಣಾ ಪಾಲಿತೋಽಸ್ಮಿ ಸಚ್ಚಿದಾನಂದ**

ಶ್ರೀಗುರುಣಾ ಪಾಲಿತೋಽಸ್ಮಿ ಸಚ್ಚಿದಾನಂದ ನಾಥನ॥ಪ॥ ಆಗಮಾದಿ ಸನ್ನುತೇನ। ಅಖಿಲ ವಿಶ್ವ ವಂದಿತೇನ। ತ್ಯಾಗರಾಜ ವಿಭಾತೇನ। ತಾಪತ್ರಯಾತೀತೇನ॥ಅ.ಪ॥ ವೇದಾಂತಾರ್ಥ ವೇದ್ಯೇನ। ವಿಕಲ್ಪರೋಗ ವೈದ್ಯೇನ। ನಾದಾಮೃತ ಸುಪಾಧ್ಯೇನ। ನವನಾಥೇ ನಾದ್ಯೇನ। ನಾಧಾಖ್ಯಕಲಾಕರೇಣ। ಸದಾ ಶಿವಾವತಾರೇಣ। ನಾದಂತ ವಿಹಾರೇಣ ನವ ಚಕ್ರ ದಾರೇಣ॥1॥ ಪಾದಾಂಬುಜೇನ ಪರೇಣ। ಭೇದಾದಿ ವಿದಾರೇಣ। ಆದಿ ಗುರುಗುಹ ವರೇಣ। ಕಾದಿಮತ ಮನುಸಾರೇಣ॥2॥

## ಮೀರಾಬಾಯಿ

**ಪಾಯೋಜಿ ಮೈನೇ (ಭಜನ್)** **ರಾಗ: ಪೀಲು**

ಪಾಯೋಜಿ ಮೈನೇ ರಾಮರತನ ಧನ ಪಾಯೋ।। ವಸ್ತು ಅಮೋಲದೀನ್ಹೋ ಮೇರೇ ಸತಗುರು। ಕಿರಪಾ ಕರ ಅಪನಾಯೋ।। ಜನಮ ಜನಮಕೀ ಪೂಂಜೀ ಪಾಯೀ। ಜಗಮೇ ಸಭೀ ಖೋಗಯೋ। ಖರಚೈನ ಖೂಟೈ ವಾಕೋ ಚೋರನ ಲೂಟೈ। ದಿನ ದಿನ ಬಢತ ಸವಾಯೋ।। ಸತಕೀ ನಾವ ಖೇವಟಿಯಾ ಸತಗುರು ಭವಸಾಗರ ತರ ಆಯೋ।। ಮೀರಾ ಕೇ ಪ್ರಭು ಗಿರಿಧರ ನಾಗರ। ಹರಖ ಹರಖ ಜಸ ಗಾಯೋ।।ಮೀರಾ।।

**ಮೋರೆ ಲಾಗಿ ಲಗನ ಗುರು** **ರಾಗ: ಬಾಗೇಶ್ರೀ**

ಮೋರೆ ಲಾಗಿ ಲಗನ ಗುರು ಚರಣನ ಕೀ।।ಪ।। ಚರಣಬಿನಾ ಮುಝೆ ಕಛು ನಹಿ ಪಾವೆ। ಝೂಟ್ ಮಾಯಾ ಸಬ್ ಸಪನನ್‌ಕೀ।।ಮೋರೆ।। ಭವಸಾಗರ ಸಬ್ ಸೂಖ್‌ಗಯಾ ಹೈ। ಫಿಕರ್ ನಹೀ ಮುಝೆ ತರಣನಕೀ।। ಮೀರಾ ಕೇ ಪ್ರಭು ಗಿರಿಧರ್ ನಾಗರ್। ಉಲಟ್ ಭಯೀ ಮೋರೆ ನಯನನಕೀ।।ಮೋರೆ।।

## ನಾರಾಯಣ ಭಗವಾನ್

**ಗುರು ಹಮಾರೇ ಮನ ಮಂದಿರ ಮೇ**

ಗುರು ಹಮಾರೇ ಮನ ಮಂದಿರ ಮೇ। ಗುರು ಹಮಾರೇ ಪ್ಯಾರ್ ಮೇ।। ಸಾರೇ ವಿಶ್ವಕಾ ವೋ ಹೈ ದಾತಾ। ನಾರಾಯಣ ಭಗವಾನ್।।1।। ಗುರು ಹಮಾರೇ ತನುಮನ್ನ ಸಬ್ ಹೈ। ಗುರು ಹಮಾರೇ ಪ್ರಾಣ್। ಜ್ಞಾನಭಕ್ತಿಕ ಯಹೀ ಹೈ ದಾತಾ। ನಾರಾಯಣ ಭಗವಾನ್।।2।। ಗುರು ಹಮಾರೇ ಧನ ದೌಲತ್ ಹೈ। ಗುರು ಹಮಾರೇ ಪ್ಯಾರ್। ಸಾರೇ ವಿಶ್ವಕಾ ಜೀವ ಸಂದೇಶ। ನಾರಾಯಣ ಭಗವಾನ್।।3।।

## ಕಬೀರ್ ದಾಸ್

**ಗುರುಗೋವಿಂದ್**

ಗುರುಗೋವಿಂದ್ ದೋನೋಂ ಖಡೇ। ಕಾಕೆ ಲಾಗೂಂ ಪಾಯ್। ಬಲಿಹಾರಿ ಗುರು ಆಪಜಿನ್। ಗೋವಿಂದ ದಿಯೋ ಮಿಲಾಯ್।। ಸಬ್ ಧರತಿ ಕಾಗದ್ ಕರೂಂ। ಲೇಖನಿ ಬನ್ ರಾಯ್। ಸಪ್ತಸಮುಂದರ್ ಕಿ ಮಸಿ ಕರೂಂ। ಗುರುಗುಣ ಲಿಖ್ ನಜಾಯ್।।

**ಗುರು ಬಿನ ಕೌನ್ ಬತಾವೇ** **ರಾಗ: ಪೀಲು**

ಗುರು ಬಿನ ಕೌನ್ ಬತಾವೇ ಬಾಟ। ಬಡಾ ವಿಕಟಯಮ ಘಾಟ। ಭ್ರಾಂತಿಕೀ ಪಹಾಡೀ ನದಿಯಾ ಬೀಚಮೆ। ಅಹಂಕಾರಕೀಲಾಟ।।1।। ಕಾಮ ಕ್ರೋಧ ದೋ ಪರ್ವತ ಠಾಢೇ। ಲೋಭ ಚೋರ ಸಂಘಾತ।।2।। ಮದ ಮತ್ಸರಕಾ ಮೋಹ ಬರಸತ ಮಾಯಾ ಪವನ ಬಹೇ ದಾಟ।। ಕಹತ ಕಬೀರ ಸುನೋ ಭಾಯಿ ಸಾಧೋ।। ಕ್ಯೊ ತರನಾ ಯಹ ಘಾಟ।।3।।

## ತುಳಸೀದಾಸ್

**ಗುರು ಪದ ರಜ ಮೃದು**

ಗುರು ಪದ ರಜ ಮೃದು ಮಂಜುಲ ಅಂಜನ। ನಯನ ಅಮಿಅ ದೃಗ ದೋಷ ಬಿಭಂಜನ।। ತೆಹಿಂ ಕರಿ ಬಿಮಲ ಬಿಬೇಕ ಬಿಲೋಚನ। ಬರನವುಂ ರಾಮ ಚರಿತ ಭವ ಮೋಚನ।।1।। ಬಂದವು ಪ್ರಥಮ ಮಹೀಸುರ ಚರನಾ। ಮೋಹ ಜನಿತ ಸಂಸಯ ಸಬ ಹರನಾ।।ಸುಜನ ಸಮಾಜ ಸಕಲ ಗುನ ಖಾನೀ। ಕರವುಂ ಪ್ರನಾಮ ಸಪ್ರೇಮ ಸುಬಾನೀ।।2।।

ಸಾಧು ಚರಿತ ಸುಭ ಚರಿತ ಕಪಾಸೂ। ನಿರಸ ಬಿಸದ ಗುನಮಯ ಫಲ ಜಾಸೂ।। ಜೋ ಸಹಿ ದುಃಖ ಪರಛಿದ್ರ ದುರಾವಾ। ಬಂದನೀಯ ಜೆಹಿಂ ಜಗ ಜಸ ಪಾವಾ।।3।। ಮುದ ಮಂಗಲಮಯ ಸಂತ ಸಮಾಜೂ। ಜೋ ಜಗ ಜಂಗಮ ತೀರಥರಾಜೂ।। ರಾಮ ಭಕ್ತಿ ಜಹಂ ಸುರಸರಿ ಧಾರಾ। ಸರಸಯಿ ಬ್ರಹ್ಮ ಬಿಚಾರ ಪ್ರಚಾರಾ।।4।। ಬಿಧಿ ನಿಷೇಧ ಮಯ ಕಲಿಮಲ ಹರನೀ। ಕರಮ ಕಥಾ ರಬಿನಂದನಿ ಬರನೀ।। ಹರಿ ಹರ ಕಥಾ ಬಿರಾಜತಿ ಬೇನೀ। ಸುನತ ಸಕಲ ಮುದ ಮಂಗಲ ದೇನೀ।।5।। ಬಟು ಬಿಸ್ವಾಸ ಅಚಲ ನಿಜ ಧರಮಾ। ತೀರಥರಾಜ ಸಮಾಜ ಸುಕರಮಾ।। ಸಬಹಿ ಸುಲಭ ಸಬ ದಿನ ಸಬ ದೇಸಾ। ಸೇವತಾ ಸಾದರ ಸಬ ದಿನ ಸಬ ದೇಸಾ। ಸೇವತ ಸಾದರ ಸಮನ ಕಲೇಸಾ।।6।। ಅಕಥ ಅಲೌಕಿಕ ತೀರಥರಾವೂ। ದೇಯಿ ಸಧ್ಯ ಫಲ ಪ್ರಗಟ ಪ್ರಭಾವೂ।।7।।

### ಬಂದವು ಗುರು ಪದ ಪದುಮ

ಬಂದವು ಗುರು ಪದ ಪದುಮ ಪರಾಗಾ। ಸುರುಚಿ ಸುಭಾಸ ಸರಸ ಅನುರಾಗಾ। ಅಮಿಲಿ ಮೂರಿಮಯ ಚೂರನ ಚಾರೂ। ಸಮನ ಸಕಲ ಭವ ರುಜ್ ಪರಿವಾರೂ।।1।। ಸುಕೃತಿ ಸಂಭು ತನ್ ಬಿಮಲ ವಿಭೂತಿ। ಮಂಜುಲ ಮಂಗಲ ಮೋದ ಪ್ರಸೂತಿ। ಜನ ಮನ ಮಂಜು ಮುಕುರ ಮಲ ಹರವಿ। ಕಿಯೇಂ ತಿಲಕ ಗುನ ಗಾನ ಬಸ ಕರನಿ।।2।। ಶ್ರೀ ಗುರ ಪದ ನಖ ಮನಿ ಗನ ಜೋತಿ। ಸುಮಿರತ ದಿವ್ಯ ದೃಷ್ಟಿ ಹಿಯಂ ಹೋತಿ। ದಲನ ಮೋಹ ತಮ ಸೋ ಸಪ್ರಕಾಸೂ। ಬಡೇ ಭಾಗ ಉರ ಆವಯಿ ಜಾಸು।।3।। ಉಘರಹಿ ಬಿಮಲ ಬಿಲೋಚನ ಹೀಕೆ। ಮಿಟಹಿಂ ದೋಷ ದುಃಖ ಭವ ರಜನೀ ಲೆ। ಸೂಝುಹಿಂ ರಾಮಚರಿತ ಮನಿ ಮಾನಿಕ। ಗುಪುತ ಪ್ರಗಟ ಜಹ ಜೋ ಜೆಹಿ ಖಾನಿಕ।।4।।

## ಏಕನಾಥ

**ಗುರುಕೃಪಾಂಜನ ಪಾಯೋ (ಹಿಂದಿ)** **ರಾಗ: ದರ್ಬಾರಿಕಾನಡ–ಆದಿತಾಳ**

ಗುರುಕೃಪಾಂಜನ ಪಾಯೋ ಮೇರೆ ಭಾಯೀ। ರಾಮಭಿನಾ ಕಛು ಜಾನತ ನಾಹೀ।। ಅಂತರರಾಮ ಬಾಹಿರ ರಾಮ। ಜಹಾಂ ದೇಖೋ ತಹಾಂ ರಾಮಹಿರಾಮ।। ಜಾಗತ ರಾಮ ಸೋವತ ರಾಮ ಸಪನೇಮೇ ದೇಖೋ ರಾಜಾರಾಮ।। ಏಕಾ ಜನಾರ್ಧನಿ ಭಾವವಿಹೀನ ಜೋ ದೇಖೋ ಸೋ ರಾಮ ಸರೀಖಾ।।

## ಅಂಜನಪ್ಪ ಸ್ವಾಮಿಗಳು

### ಇರುವನು ಶ್ರೀ ಗುರು ಪರಮಾತ್ಮರೂಪನು

ಇರುವನು ಶ್ರೀ ಗುರು ಪರಮಾತ್ಮರೂಪನು। ಹೃದಯ ಕಮಲದಲ್ಲಿ।।ಪ।। ಅನುದಿನದಲಿ ನೋಡೋ ಆತ್ಮದಲ್ಲಿರುವನು। ಆತ್ಮ ರಾಮಚಂದ್ರನು।।ಅ.ಪ.।।ಕಂಡೇನು ಗುರುಪಾದ ಕಮಲದ ಕುಶದಲ್ಲಿ। ಕನಕಾತ್ಮ ಗುರುರಾಯನ। ನಂಬಿದ ನಿನ್ನಲ್ಲಿ ನಾದ ಕಮಲದಲ್ಲಿ ನರರೂಪ ಗುರುರಾಯನ।।1।। ಹೃದಯ ಜಗಲಿಯ ಮೇಲೆ। ಹೃತ್ಕಮಲ ರೂಪನು ಉರಿಯುತ ನಿಂತಿರು ವನು। ನಾದವಿನೋದನು ನವನೀತ ಚೋರನು। ನನ್ನಲ್ಲಿ ಗುರುರಾಯನು ।।2।। ಸೃಷ್ಟಿಗಾಧಾ ರನು। ಚಿನ್ಮಯ ರೂಪನು। ಚಿಂತೆ ಪರಿಹರಿಸುವನು। ಪರಮಾತ್ಮ ನಿನ್ನಲ್ಲಿ ಪ್ರತ್ಯಕ್ಷ ನಾದನು ಪರಮಾತ್ಮ ಗುರುರಾಯನು।।3।। ಆರು ಚಕ್ರದ ಮನೆ ಆತ್ಮದಲ್ಲಿರುವನು। ಅಂಬರದಿ ನೋಡಿರಯ್ಯ। ಆಂಜನೇಯ ಸ್ವಾಮಿ ಆನಂದ ರೂಪನು ಪೂಜೆ ಮಾಡಿರಯ್ಯ।।4।।

## ಸರ್ವಜ್ಞನ ವಚನಗಳು

### ತಂದೆಗೂ ಗುರುವಿಗೂ ಒಂದು ಅಂತರ ಉಂಟು

ತಂದೆಗೂ ಗುರುವಿಗೂ ಒಂದು ಅಂತರ ಉಂಟು। ತಂದೆ ತೋರುವನು ಸದ್ಗುರುವ ಗುರುರಾಯ। ಬಂಧನವ ಕಳೆವ ಸರ್ವಜ್ಞ।।1।। ಎತ್ತಾಗಿ ತೊತ್ತಾಗಿ ಹಿತ್ತಲದ ಗಿಡವಾಗಿ। ಮತ್ತೆ ಪಾದದ ಕೆರನಾಗಿ ಗುರುವಿನ। ಹತ್ತಿಲಿರು ಎಂದ ಸರ್ವಜ್ಞ।।2।। ದಾನ ಭಕ್ತಿಗಳಲ್ಲಿ 'ನಾನು' ಮರೆದಿರಬೇಕು। ನಾನೆಂಬ ರೋಗ ನೀಗಿದರೆ ಗುರುಬೋಧೆ। ತಾನೆ

ಫಲಿಸುವುದು ಸರ್ವಜ್ಞ||3|| ಹಿಂದಿನ ಜನುಮದಲೆ। ಎನಿತೋ ಲೇಸನು ಮಾಡಿ। ಇಂದು ನಿಮ್ಮಡಿಗೆ ಎರಗಿದೆನು ಗುರುವೇ। ಭವಬಂಧನವ ಬಿಡಿಸೋ ಸರ್ವಜ್ಞ||4|| ಗುರುವಿನಿಂದ ಬಂಧುಗಳು ಗುರುವಿಂದ ದೈವಗಳು, ಗುರುವಿಂದ ಬಹುದು ಪುಣ್ಯವದು। ಜಗಕ್ಕೆಲ್ಲಾ ಗುರುವಿಂದ ಮುಕ್ತಿ ಸರ್ವಜ್ಞ||5|| ತನ್ನ ನೋಡಲಿ ಎಂದು ಕನ್ನಡಿಯು ಕರೆಯುವುದೇ? ತನ್ನಲ್ಲಿ ಜ್ಞಾನವುದಿಸಿದ ಮಹಾತ್ಮನು। ಕನ್ನಡಿಯು ಜಗಕೆ ಸರ್ವಜ್ಞ||6|||| ಶಿವಶರಣರ ವಚನ||

**ಸಕಲಕೆಲ್ಲಕು ನೀನೆ ಅಕಲಂಕ ಗುರುವೆಂದು** **ರಾಗ: ಅಠಾಣ**

ಸಕಲಕೆಲ್ಲಕು ನೀನೆ ಅಕಲಂಕ ಗುರುವೆಂದು। ನಿಖಿಲ ಶಾಸ್ತ್ರವು ಪೇಳುತಿರಲರಿದೆನು|| ಅವರವರ ದರುಶನಕೆ ಅವರವರ ದೇಶದಲಿ। ಅವರವರಿಗೆಲ್ಲ ಗುರು ನೀನೊಬ್ಬನೆ। ಅವರವರ ಭಾವಕ್ಕೆ ಅವರವರ ಅರ್ಚನೆಗೆ। ಅವರವರಿಗೆ ದೇವ ನೀನೊಬ್ಬನೇ। ಹೋರಾಟವಿಕ್ಕಿಸಲು ಬೇರಾದೆಯಲ್ಲದೆ। ಬೇರುಂಟೆ ಜಗದೊಳಗೆ ಎಲೆದೇವನೇ। ಆರೂ ಅರಿಯರು ನೀನು ಬೇರಾದ ಪರಿಗಳನು ಮಾರಾರಿ ಶಿವ ಷಡಕ್ಷರಿ ಲಿಂಗವೇ||

**ಶ್ರೀ ಗುರುವಿಗೆ ಶರಣು**

ಶ್ರೀ ಗುರುವಿಗೆ ಶರಣು। ಶಿವಯೋಗಿಗಳಿಗೆ ಶರಣು। ತಾನು ತನ್ನದು ತನ್ನವರೆನ್ನದ ಜ್ಞಾನನಿಧಿಗೆ ಶರಣು|| ಶರಣರ ಹೃದಯ ಪರ ಶಿವನಿಲಯ। ಕೈಮುಗಿಯೋ ಕೈಲಾಸದೊಳಿಡುವ। ಕಾಲಿಗೆರಗೊ ಕೈವಲ್ಯವಕೊಡುವ। ಭವಭಯ ಹರಶಿವ ಸಾಂಬ ಸದಾ ಶಿವ|| ನೆನೆಯುತ ಶಿವನ। ಕುಣಿಯೋ ನಲಿಯೋ। ಅನ್ನ ನೀಡಿದರೆ। ಅಂದಣ ವೇರುವೆ। ನನ್ನಿಯ ನುಡಿದರೆ ಕಿನ್ನರ ನಾಗುವೆ। ಹೆಣ್ಣಿಗೆ ಬೆರೆತರೆ ಹೆಣನೀನಾಗುವೆ। ಹೊನ್ನಿಗೆ ಮರೆತರೆ ಮಣ್ಣೇ ಮುಕ್ಕುವಿ||

**ಜ್ಯೋತಿ ಬೆಳಗುತಿದೆ ನಿತ್ಯಾನಂದ**

ಜ್ಯೋತಿ ಬೆಳಗುತಿದೆ ನಿತ್ಯಾನಂದ|| ತರುಣಿ ಚಂದ್ರಾನಲತಾರೆ ಮಿಂಚುಗಳೆಂಬ। ಪರಿಪರಿಬೆಳಕಿನ ಬಳಗವನೊಳಗೊಂಡ||1|| ಮಾತು ಮನಗಳಿಂದತ್ತತ್ತ ಸಾತಿಶಯದ। ನಿರುಪಾಧಿಕ ನಿರ್ಮಲ ವಿಮಲ ಪರಂಜ್ಯೋತಿ||2|| ಅಂಕೆಗೆ ಸಿಲುಕದ ಸಂಕರವೆನಿಸದ। ಶಂಕರ ಗುರುವೆಂಬಾತಂಕವಿಲ್ಲದ ಪರಂ||3||

## ಸೋಮೇಶ್ವರ ಶತಕ

**ಹಿತವಂ ತೋರುವನಾತ್ಮಬಂಧು**

ಹಿತವಂ ತೋರುವನಾತ್ಮಬಂಧು ಪೊರೆವಾತಂ ತಂದೆ। ಸದ್ ಧರ್ಮದಾ। ಸತಿಯೇ ಸರ್ವಕೆ ಸಾಧನಂ ಕಲಿಸಿದಾತಂ ವರ್ಣಮಾತ್ರಂ ಗುರು। ಶೃತಿಮಾರ್ಗಂ ಬಿಡದಾತ ಸುವ್ರತಿ ಮಹಾಸದ್ ವಿದ್ಯೆಯೇ ಪುಣ್ಯದಂ। ಸುತನೇ ಸದ್ಗತಿ ದಾತನೈ ಹರಹರಾ ಶ್ರೀ ಚೆನ್ನಸೋಮೇಶ್ವರಾ||

## ಭಾವ / ಭಕ್ತಿಗೀತೆ

**ಬಾ ಶ್ರೀ ಗುರುದೇವನೆ ಬಾ** **ರಾಗ: ಅಭೇರಿ**

ಬಾ ಶ್ರೀ ಗುರುದೇವನೆ ಬಾ|| ಶ್ಯಾಮಲಕಾನನ ಶೃಂಗ ತರಂಗಿತ। ಸಹ್ಯಾದ್ರಿಯ ಸುಂದರ ಮಂದಿರಕೆ । ಚಿನ್ಮಯ ಮಮ ಹೃನ್ಮಂದಿರಕೆ ॥ ವಂಗಮಾತೆಯಲಿ ಜನ್ಮವನೆತ್ತಿ । ದಿವ್ಯ ಸಮನ್ವಯ ಧರ್ಮವ ಬಿತ್ತಿ । ಮತಭೇದದ ವಿಷವನು ಹೋಗಾಡಿ ಲೋಕದ ದೃಷ್ಟಿಗೆ ಸಮತೆಯ ನೀಡಿ । ಕಾಪಾಡಿದ ಪಾವನ ಮೂರುತಿಯೇ ॥ ಹೇ ನವಯುಗದವತಾರ । ಪೂರ್ವ ದಿಗಂತದಿ ಕಾಂತಿಯು ಮೂಡಿ । ನಾಡಿನ ಕತ್ತಲೆಯನು ಹೋಗಾಡಿ । ಮೈದೋರುವ ತೆರದಲಿ ನೀನಂದು ನಮ್ಮೀವನ ಗೃಹ ಕೈತಂದು ನಮ್ಮೆದೆ ಕತ್ತಲ ಪರಿಹರಿಸಿ ಸುಖ ಶಾಂತಿಯ ಕಾಂತಿಯ ಬರಿಸಿ ಕೃಪೆಗೈ, ಓ ಮಮ ದೀನ ಬಂಧು ॥

**ಸೋತುಬಂದೆನು ಗುರುವೇ** **ರಾಗ: ಶುಭಪಂತುವರಾಳಿ**

ಸೋತುಬಂದೆನು ಗುರುವೇ ನಿನ್ನ ಬಳಿಗೆ। ಸೋತ ಜೀವವನಾತುಕೋ ಒಂದು ಘಳಿಗೆ॥ಪ॥ ಅರಿಯ ಹಿರಿಸರಳು ಮರುಮೊನೆಗೊಂಡ ಗಾಯದಲಿ। ಸುರಿಯುತಿದೆ ತೊರೆಯಂತೆ ಬಿಸಿನೆತ್ತರು॥ ಗಿರಗಿರನೆ ಗಾಲಿಯಲಿ ತಿರುಗುತಿಹ ಸರಳುಗಳು। ಕೊರೆಯುತಿಹುದೆದೆಯಲ್ಲಿ ಉರಿಹೊತ್ತಿಸಿ॥1॥ ಎತ್ತ ಹೋದರು ಎನಗೆ ಆಶ್ರಯವೆ ತೋರದಿದೆ। ಇತ್ತು ಕೃಪೆಯಾಶ್ರಮದಿ ತಾವನೆನಗೆ॥ ಹೆತ್ತ ಕಂದನ ಬಗೆಯ ಹೊತ್ತದುಗುಡವ ಹರಿಸಿ। ಮತ್ತೆ ನನ್ನನ್ನು ಕಳುಹೊ ರಣರಂಗಕೆ॥2॥ ಗೌರವ ರಣಾಂಗಣದಿ ನೊಂದು ಬಂದವನಲ್ಲ॥ ಪೌರುಷ ವಿಹೀನತೆಯ ಪಾಪಿಯಲ್ಲ॥ ಘೋರಸಂಗ್ರಾಮದಿ ಬಿಡುತೆ ಬೇಡುವನಲ್ಲ। ವೈರಿಯನು ಗೆಲ್ಲದೈ ತರುವನಲ್ಲ॥3॥

**ಶ್ರೀ ಗುರುವೆ ಅರಿವೆ ಶರಣಾಗಿ ಬರುವೆ** **ರಾಗ: ಕಲ್ಯಾಣಿ-ಆದಿತಾಳ**

ಶ್ರೀ ಗುರುವೆ ಅರಿವೆ ಶರಣಾಗಿ ಬರುವೆ। ಕರುಣೆಯನು ಕೋರಿಬರುವೆ। ಹೃತ್ ಪ್ರಕೃತಿ ತಂದ ಕಿರಿ ಹೂವುಗಳನು। ಶ್ರೀಚರಣಕೆರೆಯುತಿರುವೆ॥ ಆಪಾದ ಪದ್ಮ ಎದೆಗವಚಿಹಿಡಿದು। ನಡುನೆತ್ತಿಗೆತ್ತಿಕೊಂಬೆ। ಉಸಿರಿಂದಲದನೆ ಬಲಗೊಂಬೆ। ನನ್ನ ಕಣ್‌ಗೊಂಬೆಗೊತ್ತಿಕೊಂಬೆ॥ ಕಣ್ಣಿಂದ ನಿನ್ನ ನನ್ ಕಣ್ಣ ಸೇರಿ। ಎದೆಯೊಳಣ ಬೆಳಕನೆತ್ತಿ। ತಿರುಮೂರ್ತಿ ಮಾಡು ನನ್ನನ್ನು। ನಿನ್ನ ಚಿನ್ಮೋದಬೋಧಬಿತ್ತಿ॥ ಭವ ಭವಕೆ ನನ್ನ ಮುಂದೆತ್ತಿ ಒತ್ತಿ। ತಂದಂಥ ತಂದೆ ನೀನು। ಭಾವಕ್ಕೆ ಇಳಿದು ಸದ್ಭಾವ ಬಲಿಸಿ। ಬರುವಂತೆ ಮಾಡು ನಾನು॥ ಅಂತರಯದೊಂದು ಚೈತನ್ಯ ನಿನ್ನ ಕೈಂಕರ್ಯ ಕರ್ತೃವಾಗಿ। ಕ್ಷೇತ್ರಜ್ಞ ಬರಲಿ ಚೈತ್ರೇಶನಾಗಿ ಮಧು ಬೋಧ ಮೋದವಾಗಿ॥

## ಶ್ರೀ ಬ್ರಹ್ಮ ಚೈತನ್ಯರು

**ಬ್ರಹ್ಮ ಚೈತನ್ಯ ತವ ಶರಣಂ**

ಬ್ರಹ್ಮ ಚೈತನ್ಯ ತವ ಶರಣಂ। ಬ್ರಹ್ಮಾನಂದಾ ತವಚರಣಂ॥ ಸದ್ಗುರು ಮೂರ್ತಿ ತವಚರಣಂ। ಶ್ರೀ ಗುರುಮೂರ್ತಿ ತವಚರಣಂ। ದತ್ತ ನಾಥ ತವ ಚರಣಂ। ಬ್ರಹ್ಮಾನಂದ ತವಚರಣಂ। ಸದ್ಗುರು ಮೂರ್ತಿ ತವ ಚರಣಂ॥

## ಶ್ರೀ ರಾಮಕೃಷ್ಣರು

**ರಾಮಕೃಷ್ಣ ಗುರುವೇ**

ರಾಮಕೃಷ್ಣ ಗುರುವೇ। ಪರಮ ಹಂಸ ಗುರುವೇ॥ ಕಾಮಿತದಾಯಕ ಪ್ರೇಮದಿ ನಮಿಪೆವು॥ ಸಕಲ ಮತವ ನೀನೇಕವೆಂದೆಣಿಸಿದೆ। ಅಕಲಂಕ ಮಹಿಮ ಮಮದೇವ। ಲೋಕಸೇವೆಯಿಂ ಖ್ಯಾತಿಯಹೊಂದಿದೆ। ಮುಕ್ಕಣ್ಣನ ಪ್ರಿಯ ನಮಿಪೆವು ದೇವ॥1॥ ಸ್ವಾಮಿ ವಿವೇಕಾನಂದನ ಗುರುವೇ। ಪ್ರೇಮದಿ ಸಲಹೈ ಸಕಲ ಲೋಕವ। ತಾಮಸ ಮಾಡದೆ ಕಾವುದು ಎಮ್ಮನು। ಚಾಮುಂಡಾಂಬೆಯ ವರಭಕ್ತನೆ॥2॥

**ಗುರುವೆ ತಾಯಿ ಗುರುವೆ ತಂದೆ**

ಗುರುವೆ ತಾಯಿ ಗುರುವೆ ತಂದೆ। ಗುರುವೆ ದೈವ ದಾತಾರ। ಗುರುವೆ ಬಂಧು ದಯಾ ಸಿಂಧು। ಗುರುವೆ ಕೃಪೆಯ ಸಾಕಾರ॥1॥ ಗುರುವೆ ಬ್ರಹ್ಮ ಗುರುವೆ ವಿಷ್ಣು। ಗುರುವೆ ವರ ಮಹೇಶ್ವರ। ಗುರು ಪರತರ ಪರಬ್ರಹ್ಮ। ಗುರುವೆ ಸಕಲ ಆಧಾರ॥2॥ ತಮವಕಳೆದು ಬೆಳಕ ತಂದ। ದೀನಬಂಧು ಗುರುವರ। ಕರ್ಮಬಂಧ ತರಿದ ಧೀರ। ನಿನಗಿದೋ ನಮಸ್ಕಾರ॥3॥

## ಶ್ರೀ ಶಾರದಾದೇವಿ

**ಸಾರದಾರೂಪ ತಾಳಿ ಬಂದಿಹಳು**

ಸಾರದಾರೂಪ ತಾಳಿ ಬಂದಿಹಳು ತಾಯಿ ಕಾಳಿ। ಆದನರಿತೆ ರಾಮಕೃಷ್ಣ ಪೂಜಿಸಿದರು ಭಾವತಾಳಿ। ಆದ್ಯಶಕ್ತಿ ನೀ

ಮಾತೆ ಸರ್ವದೇವ ಮುಕ್ತಿದಾತೆ। ಮಹಾಲಕ್ಷ್ಮಿ ಸರಸ್ವತಿ ಗುಪ್ತರೂಪ ಜ್ಞಾನದಾತೆ।।1।। ಸೀತರಾಧ ಅನ್ನಪೂರ್ಣ ಕಾಯ ಪಡೆದ ಭುವಿಯು ಧನ್ಯ। ಪ್ರೇಮದಿಂದ ತಾಯೀ ಎಂದು। ಕರೆವ ಮನುಜ ಜಗದಿ ಮಾನ್ಯ।।2।। ದೀನಜನರ ಉದ್ಧರಿಸೆ। ದೀನರೂಪ ತಾಳಿ ಬಂದೆ। ಅಭಯೇ ನೀನು ಉಭಯ ಕರದಿ। ಅಭಯವನ್ನು ನೀಡಲೆಂದೆ।।3।।

## ಸ್ವಾಮಿ ವಿವೇಕಾನಂದ

### ಜಯ ವಿವೇಕಾನಂದ ಗುರುವರ

ಜಯ ವಿವೇಕಾನಂದ ಗುರುವರ। ಭುವನ ಮಂಗಲ ಕಾರಿ। ಚಿರಸಮಾಧಿಯ ಗಿರಿ ಶಿಖರದಿಂ। ನರರ ಸೇವೆಗೆ ಇಳಿದ ನರವರ।। ಸುಪ್ತ ದೈವರೆ ಏಳಿರೇಳಿ। ಲುಪ್ತಪದವಿಯ ಮರಳಿತಾಳಿ।। ಸಪ್ತ ಭುವಿಗಳ ಆಳಿರೆನುತ। ದೀಪ್ತವಾಣಿಯ ಜಗದಿ ಮೊಳಗಿಹೆ।। ವಿಶ್ವವ್ಯಾಪಕ ಪ್ರೇಮ ಮೂರ್ತಿಯೇ। ವಿಶ್ವ ದ್ಯೋತಕ ಪರಮ ಜ್ಞಾನಿಯೇ। ವಿಶ್ವಮುಕ್ತಿ ಸಮರ್ಪಿತಾತ್ಮನೆ। ವಿಶ್ವವಂದ್ಯನೆ ಜಯತು ಜಯತು।।

## ಗುರುಪರಂಪರೆ

### ಜಯಜಯ ರಾಮಕೃಷ್ಣ

ಜಯಜಯ ರಾಮಕೃಷ್ಣ ಭುವನ ಮಂಗಲ್। ಜಯಜಯ ಮಾತಾ ಶಾಮಾಸುತಾ ಅತಿ ನಿರಮಲ್। ಜಯ ವಿವೇಕ ಆನಂದ ಪರಮ ದಯಾಳ್। ಪ್ರಭೂರ್ ಮಾನಸಸುತ ಜಯ ಶ್ರೀರಾಖಾಲ್।।1।। ಜಯ ಪ್ರೇಮಾನಂದಪ್ರೇಮ ಮಯ ಕಲೇವರ್। ಜಯ ಶಿವಾನಂದ ಜಯ ಲೀಲಾ ಸಹಚರ್। ಯೋಗಿ ಯೋಗಾನಂದ ಜಯ ನಿತ್ಯ ನಿರಂಜನ್। ಜಯ ಶಶಿಗುರುಪದೇ ತನು ಮನ್।।2।। ಸೇವಾಪರ ಯೋಗಿವರ ಅದ್ಭುತ ಆನಂದ್। ಅಭೇದ ಆನಂದ ಜಯ ಗತ ಮೋಹ ಬಂಧ್। ಯೋಗರತ ತ್ಯಾಗವ್ರತ ತುರೀಯ ಆಖ್ಯಾತ್। ಶರತ ಸುಧೀರ ಶಾಂತ ಜೇನೊ ಗಣನಾಥ್।।3।। ಜೀವೇ ಶಿವ ಸೇವಾವ್ರತ ಗಂಗಾಧರ ವೀರ್। ಜಯ ಶ್ರೀ ವಿಜ್ಞಾನಾನಂದ ಪ್ರಶಾಂತ ಗಂಭೀರ್। ಪ್ರವೀಣ ಗೋಪಾಲ ಮಾತೃಸೇವಾ ಪರಾಯಣ್। ಸಾರದಾ ಸಾರದಾಪದೇ ಗತ ಪ್ರಾಣಮನ್।।4।। ಬಾಲಕ ಚರಿತ್ರ ಜಯ ಸುಬೋಧ ಸರಲ್ ನಾಗವರ ತ್ಯಾಗವೀರ ವಿವೇಕ ಸಂಬಲ್। ಕಥಾಮೃತ ವರ್ಷಣ ಗೌರ ಜಲಧರ್। ಗಿರಿಶ ಭೈರವ ಜಯ ವಿಸ್ವಾಸ ಆಕಾಶ್। ರಾಮಕೃಷ್ಣ ಲೀಲಾಸ್ಥಾನ್ ಜಯ ಬಾರ್ ಬಾರ್। ರಾಮಕೃಷ್ಣ ನಾಮ ಜಯ ಶ್ರವಣಮಂಗಲ್। ಭಕತ ವಾಂಛಿತ ಜಯ ಚರಣಕಮಲ್।।5।।

## ಶಿಶುನಾಳ ಶರೀಫ್

### ದೊರಕಿದಾ ಗುರು (ತತ್ತ್ವಪದ) ರಾಗ: ಮಾಯಾಮಾಳವಗೌಳ-ರೂಪಕತಾಳ

ದೊರಕಿದಾ ಗುರು ದೊರಕಿದಾ।।ಪ।। ಪರಮಾನಂದ ಬೋಧದರಿವಿನೊಳಗ ಬಂದು। ದೊರಕಿದಾ ಗುರು ದೊರಕಿದಾ।।ಅ.ಪ।। ಕರಪಾತ್ರೆ ಹಿಡಿದು ಈ ನರಶರೀರದಿ ತನ್ನ। ಅರಿವ ತನಗೆ ತೋರಿ ಪರಮ ನಂಬುಗೆಯಲ್ಲಿ।।1।। ಹಿಂದೆ ಜನ್ಮಾಂತರ ಒಂದೂ ಉಳಿಯದಂತೆ। ಒಂದು ವಸ್ತುವಾಗಿ ಚಂದದಿಂದಲಿ ಬಂದು।।2।। ಶಿಶುನಾಳಧೀಶ ಪ್ರಕಾಶ ಗೋವಿಂದನ। ಅಸಮ ತೇಜೋರೂಪ ವಿಶದವಾಗುತ ಮನಕೆ।।3।।

### ಸದ್ಗುರು ಸಾಕಿದ ರಾಗ: ಬೇಹಾಗ್-ಆದಿತಾಳ

ಸದ್ಗುರು ಸಾಕಿದ ಮದ್ದಾನೆ ಬರುತಿದೆ। ಎದ್ದು ಹೋಗಿರಿ ಇದ್ದನಿಂದಕರು।।ಪ।। ಬಿದ್ದು ಭವದೊಳು ಹೊರಳ್ಯಾಡೊ ಜನರನ್ನು। ಉದ್ಧಾರಮಾಡುತ ಬರುತಲಿದೆ।।ಅ.ಪ।। ಆಕಾಶ ನೋಡುತ ವಾಯುವ ನುಂಗುತ। ಝೇಂಕರಿಸುತಲದು ಬರುತಲಿದೆ। ಓಂಕಾರ ಹಿಡಿದು ಜವನ ಬಾಧೆಗೆದ್ದು। ಆನಂದ ಭರಿತನಾಗಿ ಬರುತಲಿದೆ।।1।। ಅಷ್ಟಮದಗಳೆಂಬೋ ಕೆಟ್ಟ ನೀಚರನ್ನು। ಸಿಟ್ಟಿಲೆ ಸೀಳುತ ಬರುತಲಿದೆ। ಹುಟ್ಟು ಸಾವುಗಳೆಂಬೋ ಬಟ್ಟೆಗಳನ್ನು ಕಟ್ಟಿ। ಸುಟ್ಟು ಕಾಮಕ್ರೋಧಗಳ

ಅದು ಬರುತಲಿದೆ॥2॥ ಪ್ರಣವ ಸ್ವರೂಪನ ಅನುದಿನ ನೋಡುತ। ಘನಸುಖದಲಿ ಅದು ಬರುತಲಿದೆ। ಪ್ರಣವ ಶಿಶುನಾಳೇಶನೊಳು ಮನವ ಮಗ್ನ ಮಾಡಿ। ಚಿನುಮಯಾತ್ಮಕವಾಗಿ ಬರುತಲಿದೆ॥3॥

### ಗುರುವೆಂದರೆ ನಿಜಕೆ ಈತನೆ

ಗುರುವೆಂದರೆ ನಿಜಕೆ ಈತನೆ। ದೊರೆಯೆಂದರು ನಿಜಕೆ ಈತನೇ॥ಪ॥ ದಿಟವ ಹುಸಿಯ ಬೆದಕಿ ನೋಡಿ ನಟನೆ ಇರದ ಹಾದಿ ತೋರಿ ಕಟಕಿ ನುಡಿಗೆ ಬಾಗದಿರುವನು ಏನು ದಿಟ್ಟ॥1॥ ಸಣ್ಣ ಮಗುವಿನಂತೆ ಮಾಟವು। ಕಣ್ಣೆನಾಚೆ ಕಂಡ ನೋಟವು। ಬಣ್ಣಬಣ್ಣ ಮಂದಿ ಮಧ್ಯೆ। ಥಣ್ಣಗಿದ್ದು ತುಸುವು ಕೆಡದೆ ತನ್ನ ನಿಜದಿ ಧ್ಯಾನ ನಡೆಸುವ-ಏನು ದಿಟ್ಟ॥2॥ ಯಾರ ಪರವಿ ಇವಗೆ ಇಲ್ಲವು। ಇವಗೆ ಯಾರ ಹಿರಿಯರಿಲ್ಲವು। ಮಾರಿಗೇಡು ಮಾಡಲೆಂದು। ನೂರು ಅಡ್ಡಿ ಮಾಡಿಯೇನು। ದಾರಿ ಬಿಡದೆ ನಡೆವ ಧೀರನು-ಶಿಶುನಾಳಧೀಶ॥3॥

### ಹಾಕಿದ ಜನಿವಾರವಾ ಸದ್ಗುರು ನಾಥಾ

ಹಾಕಿದ ಜನಿವಾರವಾ ಸದ್ಗುರು ನಾಥಾ ಹಾಕಿದ ಜನಿವಾರವಾ॥ಪ॥ ಹಾಕಿದ ಜನಿವಾರ ನೂಕಿದ ಭವಧಾರ। ಲೋಕದೆ ಬ್ರಹ್ಮಜ್ಞಾನ ನೀ ಪಡೆಯೆಂದು॥ಅ.ಪ.॥ ಸಂಧ್ಯಾವಂದನೆ ಕಲಿಸಿ-ಆನಂದದ ಬಿಂದು ಮಧ್ಯದಿ ನಿಲಿಸಿ। ನಂದಿಸಿ ಮನಸನು ಆತ್ಮದ ಜಲದಲಿ ಎಂದಿದಿಗೂ ಯಮದಂದು ಗವಳಿಯೆಂದು॥1॥ ಕಂಡ ಕಂಡವರೊಡನೆ ಅಲೆದಿ-ಧರ್ಮ ಲಂಡರ ಜತೆ ಯಾಕೆ ಬೆರೆದಿ? ಪುಂಡ ಈತನ ನೂಕು ಎಂದು॥2॥ ನಿಂದಿಸೆ, ಗುರು ಗಂಡೆಂದರೀತನೆ ನೀವಲ್ಲ ಛೀ ಎಂದು ಶಿಶುನಾಳಧೀಶ ಗುರು-ತನ್ನೊಡಲೊಳು ವಶವಾದ ಸೂತ್ರವನು ನಸುನಗುತಲಿ ತೆಗೆದಲ್ಲಿಯೆ ತೊಡಿಸಿದ। ಉಸುರಿದ ಮಂತ್ರವ ಹೊಸಬನ ಮಾಡುತ॥3॥

## ಶಿರಡಿ ಸಾಯಿಬಾಬಾ

### ಅಂತಕಮರ್ದನ ಸಾಯಿನಾಥ್

ಅಂತಕಮರ್ದನ ಸಾಯಿನಾಥ್। ಅಂತ್ಯ ಸಹಾಯ ಸಾಯಿನಾಥ್। ಅಪ್ರಮೇಯ ಸಾಯಿನಾಥ್। ಅಮಿತ ಪರಾಕ್ರಮ ಸಾಯಿನಾಥ್। ಆಪದ್ಬಾಂಧವ ಸಾಯಿನಾಥ್। ಆರ್ತತ್ರಾಣ ಸಾಯಿನಾಥ್। ಕಂಜವಿಲೋಚನ ಸಾಯಿನಾಥ್। ಕಮನೀಯನನ ಸಾಯಿನಾಥ್। ಕಾಮನರಹಿತ ಸಾಯಿನಾಥ್। ಕಾಮಿತಫಲದ ಸಾಯಿನಾಥ್। ಚಿಂತಾನಾಶಕ ಸಾಯಿನಾಥ್। ಛಿಂದಿತ ಬಂಧನ ಸಾಯಿನಾಥ್। ಶೀರಡಿವಾಸ ಸಾಯಿನಾಥ್। ಶ್ರೀಹರಿ ರೂಪ ಸಾಯಿನಾಥ್। ಧ್ವಾಂತ ವಿನಾಶಕ ಸಾಯಿನಾಥ್। ದ್ವಾರಕವಾಸ ಸಾಯಿನಾಥ್। ತತ್ವ ಬೋಧಕ ಸಾಯಿನಾಥ್। ದಕ್ಷಿಣಾಮೂರ್ತೇ ಸಾಯಿನಾಥ್। ಧರ್ಮಸುಪಾಲನ ಸಾಯಿನಾಥ್। ದಾರಿದ್ರ್ಯನಾಶನ ಸಾಯಿನಾಥ್। ದಿವ್ಯಗುಣಾಲಯೆ ಸಾಯಿ ನಾಥ್।ತೀರ್ಥಪಾದ ಸಾಯಿನಾಥ್।ನಿತ್ಯಾನಂದ ಸಾಯಿನಾಥ್। ನಿರ್ಮಲರೂಪ ಸಾಯಿನಾಥ್। ನಿರ್ಜಿತಕಾಮ ಸಾಯಿನಾಥ್। ನಿತ್ಯಮಹೋತ್ಸವ ಸಾಯಿನಾಥ್। ಭಕ್ತವತ್ಸಲ ಸಾಯಿನಾಥ್। ದೃತಕಾಲ ಪಾಪವಿಮೋಚನ ಸಾಯಿನಾಥ್। ಪತಿತಪಾವನ ಸಾಯಿನಾಥ್। ಭಾಗವತಪ್ರಿಯ ಸಾಯಿನಾಥ್। ಪುರಾಣಪುರುಷ ಸಾಯಿನಾಥ್। ಪುಣ್ಯಶ್ಲೋಕ ಸಾಯಿನಾಥ್। ಪಂಕಜನಯನ ಸಾಯಿನಾಥ್। ಮಂಗಳರೂಪ ಸಾಯಿನಾಥ್। ವೆಂಕಟರಮಣ ಸಾಯಿನಾಥ್। ಸಂಕಟ ಹರಣ ಸಾಯಿನಾಥ್। ಸರ್ವಜನಾಶ್ರಯ ಸಾಯಿನಾಥ್। ಸರ್ವಾಭೀಷ್ಟದ ಸಾಯಿನಾಥ್। ಸಚ್ಚಿದಾನಂದ ಸಾಯಿನಾಥ್। ಸಮರ್ಥ ಸದ್ಗುರು ಸಾಯಿನಾಥ್॥

### ಸಾಯಿನಾಥ ತವಶರಣಂ ಸದ್ಗುರುನಾಥ ತವಶರಣಂ

ಸಾಯಿನಾಥ ತವಶರಣಂ। ಸದ್ಗುರುನಾಥ ತವಶರಣಂ। ಪತ್ರಿಜಾತಾ, ಪುಣ್ಯಶ್ಲೋಕಾ, ಪತಿತಪಾವನ ತವಶರಣಂ॥ಪ॥ ಭೇದಾತೀತಾ ತವಶರಣಂ। ಅದ್ವೈತಬೋಧಾ ತವಶರಣಂ। ಪಿತೃಪರಿತ್ಯಕ್ತಾ, ಫಕೀರಪೋಷ, ಪುಣ್ಯಪುರುಷಾ ತವಶರಣಂ॥1॥ ನೃಸಿಂಹವಂದ್ಯಾ ತವಶರಣಂ। ಉಪಾಸನೋಪಾಸ್ಯ ತವಶರಣಂ। ವೆಂಕೂಸಶಿಷ್ಯಾ, ವಿಶ್ವ ಪೋಷಕ, ಶ್ರೀವೆಂಕಟೇಶ

ತವಶರಣಂ॥2॥ ವಿಶ್ವವಂದ್ಯಾ ತವಶರಣಂ। ವಿಭೂತಿದಾತ ತವಶರಣಂ। ಶೀರಿಡಿವಾಸ, ಶ್ರೀಹರಿರೂಪ, ಶಿಷ್ಟಜನಪಾಲನ ತವಶರಣಂ॥3॥ ಸಮರ್ಥಸದ್ಗುರು ತವಶರಣಂ। ಸರ್ವಾಂತರಾತ್ಮ ತವಶರಣಂ। ಬ್ರಹ್ಮಸಂಜಾತ, ಭಕ್ತಪೋಷಣಾ, ಭವಭಯಹರಣಾ ತವಶರಣಂ॥4॥ ಮಹಾನುಭಾವಾ ತವಶರಣಂ। ಮಹಾನುಮಹಿಮಾ ತವಶರಣಂ। ದಾಸಗಣಾಪ್ರಿಯಾ, ದಾಸಜನವಂದ್ಯಾ ದಾಸಪೋಷಣಾ ತವಶರಣಂ॥5॥ ಶ್ರೀಗುರುರಾಜಾ ತವಶರಣಂ। ಶ್ರೀ ಪರಬ್ರಹ್ಮ ತವಶರಣಂ। ವರಭೀಷ್ಮವಂದ್ಯಾ, ಕಪರ್ದೆಪೂಜ್ಯ, ತಸ್ಮಾತ್ಮದರ್ಶನಾ ತವಶರಣಂ॥6॥

## ಶ್ರೀ ರಮಣ ಮಹರ್ಷಿ

### ಜಯಗುರು ಎನ್ನಿರಿ ಜಯಗುರು — ರಾಗ: ಕೇದಾರಗೌಳ

ಜಯಗುರು ಎನ್ನಿರಿ ಜಯಗುರು ಎನ್ನಿರಿ। ಜ್ಞಾನದಾತ ರಮಣಗೆ ಜಯ ಎನ್ನಿರಿ। ಜನನ ಮರಣ ಭಯ ರೋಗಗಳೆಲ್ಲವ ಹರಿಸುವ ಗುರುವಿಗೆ ಜಯ ಜಯ ಎನ್ನಿರಿ॥ಜಯ॥ ವಿಮಲ ಜ್ಞಾನವೇ ಮೈಯಾದವನಿಗೆ। ಹೃದಯವ ದೋಚಿದ ಸುಧಾ ಸ್ವರೂಪಿಗೆ। ಹಿಂದೆ ಕಂಡಿರದ ಸುಂದರ ಪ್ರಭುವಿಗೆ। ಪ್ರಕಾಶರೂಪದ ಅಮೂಲ್ಯ ಪ್ರೀತಿಗೆ॥ಜಯ॥ ಜಯ ತಂದೆಗೆ ಜಯ ತಾಯಿಗೆ ಎನ್ನಿರಿ। ಜ್ಞಾನರೂಪಿ ಪ್ರಭುವಿಗೆ ಜಯ ಎನ್ನಿರಿ। ಉಸಿರಿಗೆ ದೇಹಕೆ ಅದಕೂ ಆಚೆಯ। ನಿರ್ಮಲ ಪ್ರಜ್ಞೆಗೆ ಜಯಜಯ ಎನ್ನಿರಿ॥ಜಯ॥ ಪಾದಕೆ ದೇಹಕೆ ಎಲ್ಲವ ಮೀರಿದ। ಅನಂತ ಸತ್ವಕೆ ಜಯಜಯ ಎನ್ನಿರಿ। ಭುವಿಗೂ ದಿವಿಗೂ ಎರಡನು ಮೀರಿದ। ಶ್ರೀಗುರು ದೇವಗೆ ಜಯಜಯ ಎನ್ನಿರಿ॥ಜಯ॥

## ಸ್ವಾಮಿ ಚಿನ್ಮಯಾನಂದರು

### ಚಿನ್ಮಯಾನಂದರ ಸ್ಮರಣೆಯ

ಚಿನ್ಮಯಾನಂದರ ಸ್ಮರಣೆಯ ಮಾಡೋ ಚಿಂತೆಯು ತೊರೆದು ನೀ ಸುಖಿಯಾಗೋ॥ಪ॥ ಭಗವದ್ಗೀತೆಯ ಸಾರವನರುಹಿದ। ಭಕ್ತಹೃದಯದಿ ತಾ ನೆಲೆಸಿರುವ। ಚಿನ್ಮಯ ಮೂರುತಿ ಕೀರ್ತಿಯ ಪಡೆದ। ಲೋಕಸಮಸ್ತಕೆ ಸನ್ಮಾರ್ಗ ತೋರಿದ॥1॥ ಚಿಂತಿತ ಮನಕೆ ಸಾಂತ್ವನ ನೀಡುವ ಗೀತಾಚಾರ್ಯನಂತೆ ಬೋಧನೆ ಮಾಡಿದ। ಸರ್ವಸಂಗವನು ಪಾವನಗೊಳಿಸಿದ। ಭಾರತಾಂಬೆಯ ಸುಪುತ್ರನೆನಿಸಿದ॥2॥ ಸತ್ಯಶೋಧನೆಯ ಮಾಡಿ ತೋರಿಸಿದ। ಬದುಕಿನ ಅರ್ಥವ ಸಾಕಾರಗೊಳಿಸಿದ। ವಿಶ್ವವ್ಯಾಪಕನಾಗಿ ವಿಜೃಂಭಿಸಿದ। ಚೈತನ್ಯ ದಾಸಗೆ ದಾರಿ ತೋರಿದ॥3॥

### ಲೋಗ್ ಕಹತೇ ಹೈಂ

ಲೋಗ್ ಕಹತೇ ಹೈಂ ಶ್ಯಾಮ್ ರಾಮ್ ರಹೀಂ। ಪಾಪ ಸಹಿತ್ ಮನಸೇ ಉನ್ಹೇ ಹಮ್ ದೇಖ್ ನಹೀ ಪಾತೆ॥ಪ॥ ಪಾಪಿ ಹೃದಯ್ ಹಮಾರಾ। ಮನ್ ಮೆ ಅಜ್ಞಾನ ಅಂಧೇರಾ। ಮೂಢಮತಿ ಹಮ್ ಅಂಧೇ। ಧೂಪ್‌ಚುಕೇ ಹೈ ಕಬಕೀ॥1॥ ಮೋಹ್ ಮಾಯಾದೂರ್ ಕರ್। ಅಜ್ಞಾನ್ ಕೋ ನಿಕಾಲ್ ಕರ್। ಹಮಾರೀ ಆಂಖೇಂ ಖೋಲ್ ದೋ ತುಮ್ಹೀ ಹಮಾರೇ ದೇವ್ ಹೋ॥2॥ ಸನ್ಮಾರ್ಗ್ ಕೇ ಅವತಾರ್ ಹೋ। ಹಮಾರೀ ಆಂಖೇಂ ಖೋಲ್ ದೋ॥ ಆದಿ ಸದ್ಗುರು ಅನಂತ ಸದ್ಗುರು। ಚಿನ್ಮಯ ಸದ್ಗುರು ಚಿನ್ಮಯ ಸದ್ಗುರು॥3॥

### ಆರತಿ ಶ್ರೀ ಚಿನ್ಮಯ ಸದ್ಗುರು

ಆರತಿ ಶ್ರೀ ಚಿನ್ಮಯ ಸದ್ಗುರು ಕೀ। ದಿವ್ಯರೂಪ್ ಮೂರುತಿ ಕರುಣಾ ಕೀ। ಆರತಿ ಸದ್ಗುರು ಕೀ॥ಪ॥ ಶರಣೋಂ ಮೇ ಉನ್ ಕೀ ಶಾಂತಿ ಸಮಾಯೀ। ಶರಣಾಗತ್ ಕೀ ಭ್ರಾಂತಿ ಮಿಟಾಯೆ। ಪಾಪ್ ತಾಪ್ ಸಂತಾಪ್ ಹರಣ್ ಕೀ॥2ಸಾರಿ॥1॥ ವೇದ ಉಪನಿಷದ್ ಗೀತಾಕೋ ಗಾಯಾ। ಧರ್ಮ ಸಂತಾಪ್ ಕಾ ಫಿರ್ ಸೇ ಜಗಾಯಾ। ಶುದ್ಧನೀತಿ ಪ್ರೀತಿ ಶಂಕರ್ ಕೀ॥2ಸಾರಿ॥2॥ ಸಿದ್ಧಭಾರ್ ಕಿ ತಪೋ ಭಮಿ ಮೇ। ನಿತ್ಯ ವಿರಾಜೆ ಗುರು ಹಮಾರೇ। ಭಕ್ತ ಹೃದಯ ಆನಂದ್ ಶ್ರೋತ್ ಕೀ॥2 ಸಾರಿ॥3॥

# ಶ್ರೀ ಸತ್ಯಸಾಯಿಬಾಬಾ

### ಪ್ರಾತಃ ಸ್ಮರಣಂ ಶ್ರೀಗುರುಚರಣಂ

ಪ್ರಾತಃ ಸ್ಮರಣಂ ಶ್ರೀಗುರುಚರಣಂ। ಸಾಯೀಶ ಚರಣಂ। ಶ್ರೀಗುರು ಚರಣಂ। ಬ್ರಹ್ಮಾನಂದ ಪ್ರದಾಯಕ ಚರಣಂ। ಶರಣಂ ಶರಣಂ ಸಾಯೀಶ ಚರಣಂ॥

### ಮಾನಸ ಭಜರೇ ಗುರುಚರಣಂ

ಮಾನಸ ಭಜರೇ ಗುರುಚರಣಂ॥ ಮಾನಸ ಭಜರೆ ಗುರುಚರಣಂ (ಸತ್ಯ) ಸಾಯೀಚರಣಂ। ಪ್ರಣಮಾಮ್ಯಹಂ॥ ನಿರ್ಮಲ ಹೃದಯ ವಿರಾಜಿತ ಚರಣಂ। ಸಕಲ ಚರಾಚರ ವ್ಯಾಪಕ ಚರಣಂ। ಭವಸಾಗರ ಉದ್ಧಾರಕ ಚರಣಂ। ಸಾಯೀಶ ಚರಣಂ ಪ್ರಣಮಾಮ್ಯಹಂ। ಸತ್ಯ ಸಾಯಿ ಚರಣಂ ಪ್ರಣಮಾಮ್ಯಹಂ॥

### ಜಯಗುರು ಜಯಗುರು ಸಾಯಿರಾಮ್

ಜಯಗುರು ಜಯಗುರು ಸಾಯಿರಾಮ್। ಜಗದ್ಗುರು ಸತ್ಯ ಸಾಯಿರಾಮ್। ಬ್ರಹ್ಮವಿಷ್ಣು ಶಿವ ಸಾಯಿರಾಮ್। ಪರಬ್ರಹ್ಮರೂಪ ಸಾಯಿರಾಮ್॥ ಮಾತಾಪಿತಗುರು ಸಾಯಿರಾಮ್। ಜಗದ್ಗುರು ಸತ್ಯ ಸಾಯಿರಾಮ್॥

### ಹರಿ ಓಂ ನಮೋ

ಹರಿ ಓಂ ನಮೋ ಶಿವಶಕ್ತಿ ನಮೋ। ಜಯ ಸದ್ಗುರು ಶ್ರೀ ಸತ್ಯಸಾಯಿ ನಮೋ॥ ಹರಿ ಓಂ ನಮೋ ಸೀತಾರಾಮ ನಮೋ। ಜಯ ಸದ್ಗುರು ಶ್ರೀಸತ್ಯಸಾಯಿನಮೋ॥ ಹರಿ ಓಂ ನಮೋ ರಾಧೇಶ್ಯಾಮ ನಮೋ। ಜಯ ಸದ್ಗುರು ಶ್ರೀಸತ್ಯ ಸಾಯಿನಮೋ॥

### ಸಾಕ್ಷಾತ್ ಪರಬ್ರಹ್ಮಸಾಯಿ

ಸಾಕ್ಷಾತ್ ಪರಬ್ರಹ್ಮಸಾಯಿ। ಗುರುವಂದನ ಸತ್ಯಸಾಯಿ॥ ಗುರುಪದರಂಜನ ಗುರಪರಮೇಶ। ಗುರುಬ್ರಹ್ಮ ಗುರುವಿಷ್ಣು ಮಹೇಶ। ಸದ್ಗುರು ಸಾಯಿ ಪರ್ತಿ ಪುರೀಶ। ಚರಣ ನಮೋಸ್ತುತೇ ಸಾಯಿಮಹೇಶ॥

### ಜಯಜಯಜಯ ಹೇ ಶ್ರೀಗುರುನಾಥ

ಜಯಜಯಜಯ ಹೇ ಶ್ರೀಗುರುನಾಥ। ಜಯಜಯಗುರುಹೇ ಸದ್ಗುರುನಾಥಾ। ಸದ್ಗುರು ನಾಥ ಸದ್ಗುರುನಾಥ॥ ಸತ್ಯಸ್ವರೂಪ ಶಿವಗುರುನಾಥ। ಅಂತಾರ್ಯಾಮಿ ವಿಶ್ವವಿಧಾತ। ಮುಕ್ತಿ ಪ್ರದಾತ। ಸಾಯಿಗುರುನಾಥ॥

### ಗುರುಬಾಬಾ ಗುರುಬಾಬಾ

ಗುರುಬಾಬಾ ಗುರುಬಾಬಾ। ಚರಣ ನಮೋಸ್ತುತೇ ಗುರುಬಾಬಾ॥ ವಿದ್ಯಾದಾಯಕ ಗುರುಬಾಬಾ। ಶಾಂತಸ್ವರೂಪ ಗುರುಬಾಬಾ॥ ಗುರುವರ ಗುರುವರ ಗುರಬಾಬಾ॥

# ಸಾವಿತ್ರಿ ಚರಿತ್ರೆಯಿಂದ

### ಬಾಲೆ ಬಾಲೇಂದುವಿನ ತೆರದೊಳು (ಸಾವಿತ್ರಿ ಚರಿತ್ರೆಯಿಂದ)

ಬಾಲೆ ಬಾಲೇಂದುವಿನ ತೆರದೊಳು। ತಾಳು ತಿರಲಭಿವೃದ್ಧಿಯನು ಭೂ। ಪಾಲ ತರಳೆಯ ಕಳೆಯನರಿದು ಪಾಧ್ಯಾಯರನುಕರೆಸಿ॥ ಮೇಲೆನಿಪ ಮನ್ನಣೆಯ ಮಾಡಿ ವಿಶಾಲ ಮತಿಗಳೆ ನಮ್ಮ ಕುವರಿಗೆ।ಪೇಳುವುದು ವಿದ್ಯೆ ಯೊಳೆನುತ್ತುತ್ಮಜೆಯೊಳಿಂತೆದ॥ ಜನನಿಯಂದದಿ ಪೋಷಿಸು ವುದಾ। ಜನಕನಂದದಿ ವಿಹಿತ ಕಾರ್ಯದೊಳನು

ಗೊಳಿಸುವುದು ಮಿತ್ರನೋಲ್ ದುಃಖವನು ಪರಿಹರಿಸಿ।। ಮನವ ಸಂತೋಷಿಪುದು ಕೀರ್ತಿಯ। ಜನಿಯಿಪುದು ಸಂಪದವನೀವುದು। ತನುಜೆ ಕೇಳಾವಿದ್ಯೆ ಸಾಕ್ಷಾತ್ ಕಲ್ಪಲತೆಯೆಂದ।। ತರಳೆಕೇಳ್ ನಿನಗಿವರು ವಿದ್ಯಾ ಗುರುಗಳಿವರ್ಗೆ ವಿನೀತೆಯಾಗಿವ ರೊರೆದಾ ವಿದ್ಯಾಬುದ್ಧಿಗಳ ಕಲಿತೊಂದುವೇಳೆಯಲಿ।। ಗುರುಗಳಾಗ್ರಹಿಸಿದರೆ ನಿನಗದು ಪರತರಾನುಗ್ರಹವೆನುತ ನೀನರಿದು ನಡೆಯೆನುತೆರಗಿಸಿದ ನಾಚಾರ್ಯಗಾತ್ಮಜೆಯ।। ಗುರುಗಳು ಸಿರಿದ ಪಾಠವನು ತಾಂ ಪರಮ ಭಕ್ತಿಯೊಳಾಲಿಸು ವಳಾದರದಿ ಪಠಿಪಳು ಮನದೊಳ ದನಡಿಗಡಿಗೆ ಭಾವಿಪಳು।। ಪರಿಪರಿಯ ಬಾಲ್ಯೋಚಿತ ಕ್ರಿಯೆಗೆರಗುತಿಹ ಮನವನು ಬಲುಹಿಂ ತಿರುಗಿಪಳು ವಿದ್ಯೆಯೊಳು ವರಗುಣೆಯಾದ ಸಾವಿತ್ರಿ।। ಮನದಿ ವಿದ್ಯಾಗುರುಗಳನು ನಿಜ ಜನಕ ನಂದದಿ ಭಾವಿಸುತ ಬಲು। ವಿನಯದಿಂದಲಿ ನಡೆವಳಾಜ್ಞೆಯ ಮೀರದಿಹಳವರ।। ಇನಿತು ಬೇಸರ ಪಡದೆ ವಿದ್ಯೆಯ। ನನುದಿನವು ಕಲಿಯುತಲಿರ್ಪಳು। ಘನಗುಣಾನ್ವಿತೆಯಾದ ತನ್ನೃಪ ಪುತ್ರಿಸಾವಿತ್ರಿ।।

### ಜಯಜಯವೆನ್ನಿ ಗುರುಜಗದೀಶಗೆ

ಜಯಜಯವೆನ್ನಿ ಗುರುಜಗದೀಶಗೆ। ಜಯಜಯ ಜಗತ್ರಯ ಪಾವನಗೆ।।ಪ।। ಆನಂದೋ ಬ್ರಹ್ಮ ಆನಂದ ಕಂದಗೆ। ಅನುದಿನ ಜಯಜಯ ಅನುಪಮಗೆ। ಸನಕ ಸನಂದ ವಂದಿತಗೆ। ಮುನಿ ಜನ ಹೃದಯ ನಿವಾಸಗೆ।।1।। ನಿಗಮ ಗೋಚರ ನಿತ್ಯ ನಿರ್ಗುಣಗೆ। ಅಗಣಿತ ಗುಣ ಪರಿ ಪೂರ್ಣಗೆ। ಝುಗಝುಗಿಸುವ ಜಗನ್ಮೋಹನಗೆ। ಜಗ ಜೀವ ಜಗತಾತ್ಮಗೇ।।2।। ಜಯಜಯ ಮಂಗಳ ಮಹಾಮುನಿಗೆ। ಮಹಿಮಾನಂದ ಗುರುಮೂರ್ತಿಗೆ। ಮಹಿಪತಿ ಸ್ವಾಮಿ ಸರ್ವೋತ್ತ ಮಗೆ। ಜಯಜಯವೆನ್ನಿರೋ ಜಗದೊಳು।।3।।



## 23. ಆಷಾಢ ಏಕಾದಶಿ

### ಏಳು ಪಂಡರಿವಾಸ

ಏಳು ಪಂಡರಿವಾಸ ಏಳು ಶ್ರೀ ದೇವೇಶ। ಏಳು ಮುಕ್ತ ಗಿರೀಶ ಏಳು ಹೃದಯೇಶ।।ಪ।। ಏಳು ಮೂಲೋಕಾಧೀಶ ಏಳು ಹೃತ್ಪದವಾಸ। ಏಳು ಏಳಯ್ಯ ಶ್ರೀಶಾ ಏಳು ಸರ್ವೇಶಾ।।ಅ.ಪ।। ಗಂಗಾಭಾಗೀರಥಿ ತುಂಗಭದ್ರಾ ಯಮುನ। ಸಂಗಮ ತ್ರಿವೇಣಿ ಸರಸ್ವತಿ ಸರಯೂ। ಮಂಗಳೆ ಚಂದ್ರಭಾಗೆಯೊಳ್ ಕೂಡಿ ಸೇವಿಸೆ ರಂಗಾಬಾಗಿಲೋಳ್ ನಿಂತು ಕಾದಿಹಳಯ್ಯ।।1।। ಪುನಗು ಜವಾಜಿ ಕಸ್ತೂರಿ ಬೆರೆಸಿದ ಜಲ। ನಿನಗೆ ತೈಲವನೊತ್ತಿ ಎರೆವೆನೆಂದು। ಕನಕ ರತ್ನದಿ ಭೂಷಿತರಾದ ದೇವ ಕನ್ನಿಕೆಯರು ಕಾದಿಹರೈಯ್ಯ ಲಕುಮಿಪತಿ।।2।। ಪಂಚಬಾಣನ ಪಿತನೆ ಪಂಚಾಮೃತ ತಂದು। ಪಂಚಕನ್ನೆಯರು ಎರೆವೆನೆಂದು। ಮಿಂಚು ಕೋಟಿಯತೇಜಾಭರಣ ಪೀತಾಂಬರ। ಪಂಚ ರೂಪಗೆ ಉಡಿಸಿ ಶೃಂಗಾರಾಗೈಯುವರು।।3।। ಕಸ್ತೂರಿ ತಿಲಕವು ಕನಕಾಂಬರದ ಶಾಲು। ಸುತ್ತಿದ ಮುಂಡಾಸು ಶೃಂಗರಿಸಿ ಮತ್ತೆ ಕಾಸಿದ ಹಾಲು ಹಣ್ಣು ಸಕ್ಕರೆ ಕೊಟ್ಟು। ಎತ್ತಿ ಬೆಳಗುವ ಮುತ್ತಿನಾರುತಿ ವಿಠಲ।।4।। ಪಾಪರಹಿತ ಏಳು ಪಾವನ್ನ ರೂಪ ಏಳು। ಗೋಪಾಲಕೃಷ್ಣವಿಠಲ ಹರಿ ಏಳು। ಶ್ರೀಪದ್ಮ ಭವಮುಖ ಅಪಾರ ಮುನಿಗಳು। ರೂಪನೋಡಲು ಇಲ್ಲಿ ಕಾದಿಹರೇಳಯ್ಯ।।5।।

### ಸಮಚರಣ ಸರೋಜಂ (ಧ್ಯಾನಶ್ಲೋಕ)

ಸಮಚರಣ ಸರೋಜಂ ಸಾಂದ್ರ ನೀಲಾಂಬುದಾಭಂ। ಜಘನ ನಿಹಿತ ಪಾಣಿಂ ಮಂಡನಂಮಂಡನಾನಾಂ।। ತರುಣ ತುಲಸಿ ಮಾಲಾಂ ಕಂಧರಂ ಕಂಜನೇತ್ರಂ। ಸದಯ ಧವಲ ಹಾಸಂ ವಿಠ್ಠಲಂ ಚಿಂತಯಾಮಿ।।

### ಭಾಸ್ವನ್ಮಂಗಳಮೂರ್ತಿರಿಷ್ಟ

ಭಾಸ್ವನ್ಮಂಗಳಮೂರ್ತಿರಿಷ್ಟ ಕಟಿತೇ ಪೀಠೇ ವದಾಭ್ಯಾಂ ಸ್ಥಿತಃ। ಪಾಣಿ ದ್ವಂದ್ವ ಸಮುಲ್ಲ ಸತ್ಕಟಿತಟ ಶ್ರೀ ಪುಂಡರೀಕಾಕ್ಷಣೀ। ಭೀಮಾತೀರವಿಭಾಸಿ ಘಂಡರಾಪುರಾವಾಸೀ ಹರಿರ್ವಿಟ್ಠಲ ಲಃಚಿತ್ತೇ। ಖೇಲತು ಪುಂಡರೀಕ ವರದಃ ಶ್ರೀ ಪಾಂಡುರಂಗೋ ವಿಭುಃ॥

### ಎಂದು ನೋಡುವೆ ನಿನ್ನ — ರಾಗ: ಕಲಾವತಿ

ಎಂದು ನೋಡುವೆ ನಿನ್ನ ಶ್ರೀಪಾಂಡುರಂಗ॥ಪ॥ ಎಂದು ನೋಡುವೆ ನಿನ್ನ ಪದದ್ವಯದ ಚಂದ್ರಭಾಗ ನಿವಾಸ ಕರುಣಾಸಿಂಧು, ಭಕುತರ ಬಂಧು ಅಜಭವರಿಂದ ಪೂಜಿತ ಪಾದಪೂರ್ಣ॥ಅ.ಪ॥ ವೇದ ವ್ಯಾಸರ ನಾಥಾ। ವಸುಧೆಯೊಳ್ ಪುರಂಧರ ದಾಸರಲಿ ಅತಿ ಪ್ರೀತಾ। ಪುಂಡಲಿಕವರದ ಶೇಷಶಾಯಿ ಪ್ರಖ್ಯಾತಾ-। ದುರ್ಬಲರದಾತಾ॥ ಕಾಸುವೀಸಕೆ ಆಸೆ ಪಡದೆಲೆ ಪೋಷಿಸುವಿ ನಿಜ ಭಕುತರನುದಿನ। ಶ್ರೀಶನಿನ್ನವಿಶೇಷ ದರುಶನದಾಸೆ ಪೂರೈಸೋ ತಂದೆ॥1॥ ಗಜವರದ ಗಂಭೀರಾ। ರುಕ್ಮಿಣೀ ಮನೋಹರ ಸುಜನರಿಗೆ ಮಂದಾರ। ತರುವಂತೆ ಇರುತಿರೆ ವಿಜಯಸಾರಥಿ ಧೀರಾ। ಕರುಣಾ ಅಪಾರಾ। ತ್ರಿಜಗದೀಶ್ವರ ತ್ರಿಗುಣವಿರಹಿತ ಧ್ವಜವಜ್ರಾಂಕಿತ ಪಾದ ಪದ್ಮನೆ। ವಿಜಯರಾಯರ ಭಜನೆಗೊಲಿದು। ಹೃದಯದಲಿ ನಿಜರೂಪ ತೋರಿದಿ॥2॥ ಸೃಷ್ಟಿಗೊಡೆಯನೆ ನಿನ್ನ। ಎಷ್ಟೆಂದು ಭಜಿಸಲಿ ಕೃಷ್ಣವನೆ ಕಳೆ ಮುನ್ನ। ನಿನ್ನ ವರ ಪದದಲಿ ನಿಷ್ಠೆಯನು ಕೊಡು ಚನ್ನಾ। ನಾಗಾರಿಗಮನಾ। ವಿಠಲಾ ನಿನ್ನ ಬಿಟ್ಟು ಸುಖವನು ಎಷ್ಟಕೂ ಕಾಣೆನೋ। ಕರುಣದ ಇಟ್ಟುಪಾಲಿಸಬೇಕು। ಶ್ರೀವರ ವಿಠಲಾಕರ ಕಟಿತ ಶೋಭಿತ॥3॥

### ರಂಗ ಬಾರೋ ಪಾಂಡುರಂಗ ಬಾರೋ — ರಾಗ: ಕಾನಡ

ರಂಗ ಬಾರೋ ಪಾಂಡುರಂಗ ಬಾರೋ। ರಂಗ ಬಾರೋ ನರಸಿಂಗಬಾರೋ॥ಪ॥ ಕಂದ ಬಾರೋ ಎನ್ನ ತಂದೆ ಬಾರೋ। ಇಂದಿರಾರಮಣ ಮುಕುಂದ ಬಾರೋ॥1॥ ದೇವ ಬಾರೋ ಎನ್ನ ಸ್ವಾಮಿ ಬಾರೋ। ಪಾವನ ಮಾಡುವ ಪುರುಷೋತ್ತಮ ಬಾರೋ॥2॥ ಅಪ್ಪ ಬಾರೋ ತಿಮಪ್ಪ ಬಾರೋ। ಕಂದರ್ಪನಯ್ಯನೇ ಕಂಚಿ ವರದ ಬಾರೋ॥3॥ ಅಣ್ಣ ಬಾರೋ ಎನ್ನ ಚಿನ್ನ ಬಾರೋ। ಪುಣ್ಯ ಮೂರ್ತಿ ಮಹಿಷಿಪುರಿ ಚೆನ್ನ ಬಾರೋ॥4॥ ವಿಷ್ಣು ಬಾರೋ ಉಡುಪಿ ಕೃಷ್ಣ ಬಾರೋ। ಎನ್ನಿಷ್ಟಮೂರ್ತಿ ಪುರಂಧರವಿಠ್ಠಲ ಬಾರೋ॥5॥

### ಬಾರೋ ಪಂಡರ ಪುರದ ಹರಿಯೆ (ಭಕ್ತಿಗೀತೆ) — ರಾಗ: ಬೃಂದಾವನಿ

ಬಾರೋ ಪಂಡರ ಪುರದ ಹರಿಯೆ ವಿಠಲ। ತೋರೋ ನಿನ್ನಯ ಮುಖವ ನನಗೆ ವಿಠಲ। ನನ್ನೂರು ಬಲು ದೂರ ಹರಿಯೆ ವಿಠಲ। ನೆನೆದಲ್ಲಿ ನೀನಿರುವೆಯಂತೆ ವಿಠಲ॥1॥ ಬಡವ ಕುಂಬಾರನು ನಿನಗೆ ಭಕ್ತ। ಶುದ್ಧ ಮನದಲಿ ಇರುವ ತುಂಬು ಭಕ್ತಿ। ನಿನ್ನ ಅಳಿಯಲು ಸ್ವಾಮಿ ಯಾರು ಶಕ್ತಿ। ನಿನ್ನಂತರಂಗವನ್ನು ಗೆಲುವ ಶಕ್ತಿ॥2॥ ರುಕ್ಮಿಣಿ ರಮಣನೇ ಪಾಂಡುರಂಗ। ಜನುಮ ಜನುಮಕು ಇರಲಿ ನಿನ್ನ ಸಂಗ। ಭಕ್ತವತ್ಸಲ ನೀನು ಪಾಂಡುರಂಗ। ಕೈ ಹಿಡಿದು ನಡೆಸೆನ್ನ ಕರುಣಾಂತರಂಗ॥3॥

### ಬಂದೇವು ಪಂಡರಪುರಕೆ — ರಾಗ: ಸಿಂಧುಬೈರವಿ

ಬಂದೇವು ಪಂಢರಪುರಕೆ। ಭವಬಂಧನವ ಕಳೆವುದಕೆ। ಭವ ಬಂಧನವ ಕಳೆವುದಕೆ ಪಾಂಡುರಂಗನ ನೋಡುವುದಕೆ॥ಪ॥ ಚಂದ್ರಭಾಗಸ್ನಾನವ ಮಾಡಿ। ಪುಂಡರೀಕ ವರದನ ನೋಡಿ। ಮುದದಿಂದ ಪದಗಳ ಪಾಡಿ। ಪಾಂಡುರಂಗ ವಿಠಲನ ಬೇಡಿ॥1॥ ರಂಗನ ಮುದ್ದು ಮಹದ್ವಾರ। । ಮುತ್ತು ಮಾಣಿಕ್ಯದ ಗೋಪುರಾ। ಇಟ್ಟಿಗೇಲಿ ನಿಂತನೆ ಧೀರ। ನಮ್ಮ ಪಾಂಡುರಂಗ ವಿಠಲ॥2॥ ಅಕ್ರೂರ ಗೊಲಿದನು ಈತ। ಅಂಬರೀಶ ಗೊಲಿದನು ಈತ। ಪ್ರಹ್ಲಾದ ವರದನೆ ಈತಾ। ಪಾಂಡುರಂಗ ವಿಠಲನೆ ಈತ॥3॥

### ಕಂಡೆ ಪಂಢರಿರಾಯನ

ಕಂಡೆ ಪಂಢರಿರಾಯನ॥ಪ॥ ಕಂಡೆ ಪಂಢರಿರಾಯನ। ಪಾಂಡವ ಪ್ರೀಯನ। ಪುಂಡರೀಕವರದ ಉದ್ದಂಡ ಮಹಿಮನ॥ಅ.ಪ.॥ ಗಾನ ಲೋಲ ದೀನ ಪಾಲನ। ದೀನ ಜನರ ಉದ್ಧಾರ ಮಹಿಮನ॥1॥ ಜಗದ್ವ್ಯಾಪಕನ ಜಗದ್ರಕ್ಷಕನ। ಜಗವ ಪಾಲಿಪ ಜಗದೋದ್ಧಾರನ॥2॥ ಧರಣೀಶನ ಅಪಾರ ಮಹಿಮನ। ಮಾರುತೀಶ ಗುರು ಶ್ರೀಶ ವಿಠಲನ॥3॥

### ಕಂಡು ಧನ್ಯಳಾದೆ ನಾ — ರಾಗ: ಹಂಸನಾದ

ಕಂಡು ಧನ್ಯಳಾದೆ ನಾ। ಪಾಂಡುರಂಗವಿಠಲನಾ॥ಪ॥ ಕಂಡು ಧನ್ಯಳಾದೆ ಹರಿಯ ಪುಂಡರೀಕ ಪದದಿ ಎನ್ನ। ಮಂಡೆಯಿಟ್ಟು ವಂದಿಸುತಲಿ ಪುಂಡರೀಕ ವರದನಾ॥ಅ.ಪ॥ ದೂರದಿಂದ ಬಂದು ಹರಿಯ ಸೇರಿವಂದಿಸುತಲಿ ಈಗ। ಹಾರಹಾಕಿ ನಮಿಸಿ ಮನೋಹರನ ನೋಡಿ ದಣಿದೆನಿಂದು॥1॥ ಗುರುಗಳಂತರ್ಯಾಮಿ ಹರಿಯ। ಇರಿಸಿ ಎನ್ನ ಬಿಂಬ ಸಹಿತ। ಸ್ಮರಿಸಿ ಚಿಂತಿಸಿ ವಿಠಲನಲ್ಲಿ। ಕರುಣಮೂರ್ತಿಪಾಂಡುರಂಗನ॥2॥ ಗುರುಪುರಂದರ ಸ್ತಂಭ ಕಂಡೆ ವರದ ಚಂದ್ರಭಾಗ ತೀರ ಕಂಡೆ। ಚರಣ ಇಟ್ಟಿಗೆಯಲ್ಲಿ ಇಟ್ಟ ಸಿರಿಗೋಪಾಲಕೃಷ್ಣವಿಠಲನ॥3॥

### ಕಂಡೆ ಕಂಡೆ ಪಂಡರೀಶನ ಕಂಡೆ — ರಾಗ: ನಾದನಾಮಕ್ರಿಯ

ಕಂಡೆ ಕಂಡೆ ಪಂಡರೀಶನ ಕಂಡೆ॥ಪ॥ ಕಂಡೆ ಪಂಡರಿಪುರದಿ ಮೆರೆವನ। ಕಂಡೆ ಭಕ್ತರ ಕಾವ ಬಿರುದನ। ಕಂಡೆ ಮಂಡೆಯ ಚರಣದಲ್ಲಿಡೆ। ಹಿಂಡು ಅಘಗಳ ತರಿವವಿಠಲನ॥ಅ.ಪ.॥ ಕಟಿಯಲೀ ಕರವಿಟ್ಟು ಮೆರೆವನ। ಹಟದಿ ವಗದಿಟ್ಟಿಗೆಲಿ ನಿಂತನ। ಸ್ಫಟಿಕ ಹಾರನ ಕಟಕ ಮಕುಟನ।ವಟದೆಲೆ ಮೇಲೊರಗಿದಂಥನ। ಕುಟಿಲ ಕುಂತಳ ಫಣೆಯ ತಿಲುಕನ। ತೃಟಿಯು ತೆರವಿಲ್ಲದಲೆ ನಮಿತನ। ವಟುವೆನಿಸಿ ಬಲಿರಾಯಗೊಲಿದನ। ನಟನೆಗೈಯ್ಯುವ ದಿವ್ಯರೂಪನ॥1॥ ಚಂದ್ರಭಾಗಾ ತೀರದಲ್ಲಿಹನ। ಚಂದ್ರಕೋಟಿಸ್ಮರನ ರೂಪನ। ಇಂದಿರೆಯ ಸಹಿತದಲಿ ನೆಲಸುತ। ಚಂದ್ರದ್ವಾರಗಳಿಂದಲೆಸವನ। ಬಂದ ಭಕ್ತರ ಬೇಧ ನೋಡದೆ ಸುಂದರುಶನಾನಂದವೀವನ ಚಂದ್ರಮಂಡಲ ಮಧ್ಯವರ್ತಿಯ ಚಂದ್ರಕುಲಕೆ ತಾ ಚಂದ್ರನೆನಿಪನ॥2॥ ವಿಠ್ಠಲನ ಪುರದಲ್ಲಿ ಹರಿಯುವ। ಶ್ರೇಷ್ಠ ಇಂದುಬಾಗೆಯಲಿ ಮಿಂದು ಮುಟ್ಟಿ ವಿಠಲನ ಚರಣಕಮಲವ ಬಿಟ್ಟು ಮನದ್ವಂಬಲಗಳೆಲ್ಲವ ವಿಠ್ಠಲಾ ನೀನೆ ಗತಿ ಕೈ ಗೊಟ್ಟು ಕಾಯೆಂದೆನುತ ಸ್ತುತಿಸಿ। ಕಷ್ಟಹರ ಗೋಪಾಲಕೃಷ್ಣ। ವಿಠ್ಠಲನ ಚರಣಾಂಬುಜಗಳನು॥3॥

### ಅಕ್ಕೋ ಅಲ್ಲಿದ್ದಾನೆ ಇಕ್ಕೋ ಕಾಣಿಸುತ್ತಾನೆ

ಅಕ್ಕೋ ಅಲ್ಲಿದ್ದಾನೆ। ಇಕ್ಕೋ ಕಾಣಿಸುತ್ತಾನೆ॥ಪ॥ ಸರ್ವರಲ್ಲಿದ್ದಾನೆ। ಸಜ್ಜನರ ಪಾಲಿಸುತ್ತಾನೆ ॥ಅ.ಪ.॥ ಪಂಢರಪುರವಂತೆ ಅಲ್ಲಿ ಪಾಂಡುರಂಗನಂತೆ। ಪುಂಡಲೀಕನಂತೆ ಅವನ ಭಕ್ತಿಗೆ ಮೆಚ್ಚಿದನಂತೆ॥1॥ ತುಳಸಿಮಾಲೆಗಳಿಂದ ಬುಕ್ಕಿಟ್ಟುಕೊರಳಿಗೆ ಛಂದ। ಭಕ್ತರು ನೋಡೋದೇ ಅಂದ। ಅವನ ಅಪ್ಪಿಕೊಂಬೋದೇ ಛಂದ॥2॥ಶಿಷ್ಯನ ವೇಷದಿಂದ ತಂಬಿಗೆ ನೀರು ತಂದ। ದಾಸರಿಗೆ ಕೊಟ್ಟಿದ್ದರಿಂದ। ತಲೆಗೆ ಪೆಟ್ಟು ತಿಂದ॥3॥ ದಾಸರ ವೇಷದಿಂದ ವೇಶ್ಯೆಯ ಮನೆಗೆ ಬಂದ। ಕಂಕಣ ಕೊಟ್ಟಿದ್ದರಿಂದ ಹೆಡೆ। ಮುರಿಗೆ ಕಟ್ಟಿದ್ದೆ ಛಂದ॥4॥ ದಾಸರು ವಿಠಲ ಕೂಡಿ ವಾದವಿವಾದ ಮಾಡಿ। ಶ್ರೀಪತಿ ಗುಣವ ಕೊಂಡಾಡಿ। ಪುರಂಧರವಿಠ್ಠಲನ್ನ ನೋಡಿ॥5॥

### ಎಷ್ಟು ಪುಣ್ಯ ಮಾಡಿ ಇಲ್ಲಿ ಇಟ್ಟಿಗೆ — ರಾಗ: ಕಾನಡ

ಎಷ್ಟು ಪುಣ್ಯ ಮಾಡಿ ಇಲ್ಲಿ ಇಟ್ಟಿಗೆ ನೆಲಸಿತೋ। ವಿಠ್ಠಲನ್ನ ಚರಣ ಶಿರದಿ ಮೆಟ್ಟಿಸಿ ಕೊಂಡಿತೋ॥ಪ॥ ಭಕ್ತನಾದ ಪುಂಡಲೀಕನ ಕರಕೆ ಸೋಕಿತೋ॥ ಚಿತ್ತದೃಡನು ಎಸೆಯೆ ರಂಗನ ಪಾದಕೆರಗಿತೋ॥1॥ ಹರಿಯೆ ಎನ್ನ ಶಿರವ ಮೆಟ್ಟೆಂದ್ದರಿಕೆ ಮಾಡಿತೋ। ಪರಮ ಪುರುಷ ಬಂದು ನಿಲ್ಲೆ ಖ್ಯಾತಿ ಪೊಂದಿತೋ॥2॥ ಒಲಿದು ಮೆಚ್ಚಿದಂಥ ಪಾದ

ಶಿರದಿ ಪೊತ್ತಿತೋ। ಇಳೆಯನಳೆದ ಪಾದ ಇಲ್ಲಿ ಅಡಗಿಸಿಕೊಂಡಿತೋ॥3॥ ಗೋಕುಲದಲಿ ಮೆರೆದ ಪಾದ ಸೋಕಿಸಿಕೊಂಡಿತೋ। ನಾಕ ಜನರು ವಂದಿಪ ಪಾದ ನನ್ನದೆಂದಿತೋ॥4॥ ಯಮುನ ದಡದಿ ಸುಳಿದ ಪಾದಯತ್ನದಿ ಪೊಂದಿತೋ। ರಮೆಯು ಸೇವಿಪಂಥ ಪಾದ ರಜವ ಧರಿಸಿತೋ॥5॥ ಬಂಧ ಬಿಡಿಸುವಂಥ ಪದದಿ ಬಂಧಿಸಿಕೊಂಡಿತೋ। ಸುಂದರ ಸುಕೋಮಲನ ಪಾದ ಸೂಕ್ಷ್ಮದಿ ಪೊತ್ತಿತೋ॥6॥ ಪೋಗಳಲೊಶವು ಅಲ್ಲದ ಪಾದ ಘಳಿಗೆ ಬಿಡದಾಯ್ತೋ। ಜಗದಲಿಟ್ಟಿಗೆ ನಿಲಯನೆಂಬೊ ಲಾಭ ಹೊಂದಿತು॥7॥ ನಂದ ಕಂದ ಬಂದನೆಂದು ನಲಿದು ನಿಂತಿತೋ। ಇಂದಿರೇಶ ಪೋಗದಿರೆಂದು ಇಲ್ಲೆ ಹಿಡಿದಿತೋ॥8॥ ಪಾಪ ಕಳೆದು ಪಾವನ್ನದಲಿ ಮುಕ್ತಿ ಪೊಂದಿತೋ। ಗೋಪಾಲಕೃಷ್ಣವಿಠ್ಠಲನ ಚರಣ ಸೇರಿತೋ॥9॥

### ಇಟ್ಟಿಗೆ ಮೇಲೆ ನಿಂತ ನಮ್ಮ ವಿಠಲ — ರಾಗ: ಕಾಮವರ್ಧಿನಿ

ಇಟ್ಟಿಗೆ ಮೇಲೆ ನಿಂತ ನಮ್ಮ ವಿಠಲ ತಾನು। ಪುಟ್ಟಪಾದ ಊರಿನಿಂತ ದಿಟ್ಟ ತಾನು॥ಪ॥ ಪುಟ್ಟಪಾದ ಊರಿನಿಂತ। ಗಟ್ಟಿಯಾಗಿ ನಿಂತನಮ್ಮ। ಟೊಂಕದ ಮೇಲೆ ಕೈ ನಿಟ್ಟು। ಭಕ್ತರು ಬರುವುದ ನೋಡುವನು॥1॥ ಪಂಡರಾಪುರ ದಲ್ಲಿರುವನಂತೆ। ಪಾಂಡುರಂಗ ಸೇರಬಂದಂತೆ। ಚಂದ್ರಭಾಗ ಪಿತನಿವನಂತೆ। ಅಂಗನೆ ರುಕ್ಮಿಣಿ ಅರಸನಂತೆ॥2॥ ಹಣದ ಆಸೆ ಇವನಿಗಿಲ್ಲವಂತೆ। ಕನಕದಾಸೆ ಬೇಕಿಲ್ಲವಂತೆ। ನಾದಬ್ರಹ್ಮ ಎಂಬುವನಂತೆ। ಭಕ್ತರ ಭಜನೆಗೆ ಒದಗುವನಂತೆ॥3॥ ಕರಿಯ ಕಂಬಳಿ ಹೊದ್ದಿಹನಂತೆ। ಹಣೆಗೆ ನಾಮ ಹಚ್ಚಿಹನಂತೆ। ತುಳಸಿ ಮಾಲೆ ಹಾಕಿದನಂತೆ। ಪುರಂದರ ವಿಠಲ ಒಲಿದವನಂತೆ॥4॥

### ಕಟಿಯಲ್ಲಿ ಕರವಿಟ್ಟನು ಪಂಡರಿರಾಯ

ಕಟಿಯಲ್ಲಿ ಕರವಿಟ್ಟನು ಪಂಢರಿರಾಯ। ಕಟಿಯಲ್ಲಿ ಕರವಿಟ್ಟನು॥ಪ॥ ಗೊಲ್ಲಬಾಲಕ ರೊಡಗೂಡಿ ತಾ ಬಂದು। ಗೊಲ್ಲತಿಯರ ಮನೆ ಪೊಕ್ಕು ಬೆಣ್ಣೆಯ ತಿಂದು। ಬಲ್ಲಿದ ತೃಣಾವರ್ತ ಮೊದಲಾದಸುರರ। ಮೆಲ್ಲನೆ ಕೊಂದಿದಾಯಾಸ ದಿಂದಲೋ॥1॥ ಮುಂದದಿಂದ ವ್ರಜದ ಹದಿನಾರು ಸಾವಿರ। ಸುದತಿಯರಾಳಿದ ಮದದಿಂದಲೋ। ಮದಗಜವನೇರಿದ ಮದಹಂತಕ ಕೃಷ್ಣ। ಒದಗಿ ಮಾವನ ಕೊಂದಾದಿಯಾಸದಿಂದಲೋ॥2॥ ರಾಜಸೂಯ ಯಾಗದಲ್ಲಿ ರಾಜೇಶ್ವರ ರಾಜರು। ಮೊದಲಾದ ಸುರರೆಲ್ಲರು। ಭೋಜನವನು ಮಾಡಿದೆಂಜಲು ಮೊದಲಾದದ್ದು। ರಾಜೀವಾಕ್ಷನು ಎತ್ತಿ ದಾಯಾಸದಿಂದಲೋ॥3॥ ಸುರಪ ತನಗೆ ಸಾರಥ್ಯವನೆಮಾಡಿ। ಭರದಿಂದ ಚಕ್ರವಪಿಡಿದುದರಿಂದಲೋ। ಪರಿಪರಿ ವಿಧದಿಂದ ಕುದುರೆಗಳತೊಳೆದು। ಕೆಲಸಮಾಡಿದಾಯಾಸದಿಂದಲೋ॥4॥ ನೇಮದಿಂದಲಿ ಬಂದ ಭಕ್ತರು ನಿಮ್ಮ ಚರಣ। ಕಮಲ ಯುಗ್ಮವ ಮುಟ್ಟಿ ಭಜಿಸುತಿರೆ। ಮಮತೆಯಲಿ ಅವರ ಭವವ ಕಳೆವೆನೆಂದು ಕಮಲ ನಾಭ ಸಿರಿ ಪುರಂದರ ವಿಠ್ಠಲ॥5॥

### ಜಯಜಯ ವಿಠಲ ಪಾಂಡುರಂಗ

ಜಯಜಯ ವಿಠಲ ಪಾಂಡುರಂಗ। ಜಯಹರಿ ವಿಠಲ ಪಾಂಡುರಂಗ॥ಪ॥ ತಂದೆ ತಾಯಿಯು ಪಾಂಡುರಂಗ। ಬಂಧುಬಳಗವು ಪಾಂಡುರಂಗ॥1॥ ಭಕ್ತ ಪೋಷಕ ಪಾಂಡುರಂಗ। ಮುಕ್ತಿಪ್ರದಾಯಕ ಪಾಂಡುರಂಗ॥2॥ ಅನಾಥ ರಕ್ಷಕ ಪಾಂಡುರಂಗ। ಆಪದ್ಬಾಂದವ ಪಾಂಡುರಂಗ॥3॥

### ಜಯತು ಜಯ ವಿಠಲ — ರಾಗ: ಮೋಹನ

ಜಯತು ಜಯ ವಿಠಲ। ನಿನ್ನ ನಾಮವು ಶಾಂತಿಧಾಮವು। ಸೌಖ್ಯದಾರಾಮ॥ಪ॥ ಪಾವನಾಂಗ ಪಂಡರಿನಾಥ। ಪಾದಸೇವಾ ಪುಣ್ಯವನೀತಾ। ಕರುಣಿಸಿಬಾರಯ್ಯ ದರುಶನ ತಾರಯ್ಯ। ನೀ ಎನ್ನ ಭಾಗ್ಯವಯ್ಯ ಪಾಂಡುರಂಗ ಪಾಂಡುರಂಗಯ್ಯ॥1॥ ಕನಸು ಮನಸಿನ ಜೀವವು ನೀನೆ। ಅಂತರಾತ್ಮದ ಭಾವವು ನೀನೆ। ಅನ್ಯವು ಇಲ್ಲಯ್ಯ ಎಲ್ಲವು ನೀನಯ್ಯ। ತುಕಾ ಎಂದ ಮಾತಿದಯ್ಯ ಪಾಂಡುರಂಗ ಪಾಂಡುರಂಗಯ್ಯ॥2॥

### ಭಜಮನ ಪಾಂಡುರಂಗ

ಭಜಮನ ಪಾಂಡುರಂಗ ವಿಠ್ಠಲ ಜಯ್। ವಿಠ್ಠಲ ವಿಠ್ಠಲ ಜಯ್ ವಿಠ್ಠಲ ಜಯ್।। ವಿಠ್ಠಲ ಭಜಮನ ಪಾಂಡುರಂಗ ವಿಠ್ಠಲ। ಜಯ್ ವಿಠ್ಠಲ ರುಕ್ಕುಮಾಯಿ ವಿಠ್ಠಲ। ಜಯ್ ವಿಠಲ ಜಯ್ ವಿಠ್ಠಲ ಭಜಮನ ಪಾಂಡುರಂಗ ವಿಠಲ ಜಯ್ ವಿಠ್ಠಲ ಪಂಡರಿನಾಥ ವಿಠಲ ಜಯ್।।

### ಹರೇ ವಿಠ್ಠಲ ಪಾಂಡುರಂಗ

ಹರೇ ವಿಠ್ಠಲ ಪಾಂಡುರಂಗ। ಪರಿಪಾಲಯ ಕಂಸಾರೇ।।ಪ।। ಕರಕಮಲದ್ವಯ ಕಟಿಯಮೇಲೆ ಇಟ್ಟ। ಪರಮ ಪುರುಷ ಶೌರೇ ಮುರಾರೇ।।ಅ.ಪ.।। ಜಲಜಭವಾಧಿಸುರಸನ್ನುತಪಾದ। ಜಲಜನಾಭನಾದ। ಕಲುಷದೂರ ಕರುಣಾಕರರಂಗ। ಸುಲಲಿತ ಮಹಿಮ ಹರೇಮುರಾರೇ।।1।। ಪುಂಡಲೀಕವರದಾತ ಮುಕುಂದ। ಕುಂಡಲಿಶಯನ ಹರೇ। ಅಂಡಜವಾಹನ ಅಪ್ರಾಕೃತಕಾಯ। ಕುಂಡಲಧರ ಹರೇ ಮುರಾರೇ।।2।। ದಿಟ್ಟತನದಿ ಹರಿ ಭಕ್ತಕೊಟ್ಟ। ಇಟ್ಟಿಗೆ ಮೇಲೆ ನಿಂತದೇವ। ಸೃಷ್ಟಿಗೊಡೆಯ ಶ್ರೀ ವಿಜಯವಿಠ್ಠಲ। ದುಷ್ಟ ಕುಲಾಂತಕನೇ ಶ್ರೀ ಕೃಷ್ಣಾ।।3।।

### ವಿಠ್ಠಲ ವಿಠ್ಠಲ ಪಾಂಡುರಂಗ — ರಾಗ: ಪುನ್ನಾಗವರಾಳಿ

ವಿಠ್ಠಲ ವಿಠ್ಠಲ ಪಾಂಡುರಂಗ। ಪಂಡರಿನಾಥ ಪಾಂಡುರಂಗ।। ಪಂಡರ ಪುರವಾಸ ಪಾಂಡುರಂಗ। ಭವರೋಗ ವೈದ್ಯ ಪಾಂಡುರಂಗ।।1।। ಶೇಷ ಶಯನ ಹರಿ ಪಾಂಡುರಂಗ। ದೋಷ ನಿವಾರಕ ಪಾಂಡುರಂಗ। ಸಾಸಿರ ನಾಮದ ಪಾಂಡುರಂಗ। ಕೇಶವ ದಾಸನುತ ಪಾಂಡುರಂಗ।।2।।

### ಪಂಢರ ಪುರವಾಸ ಪಾಲಿಸೋ

ಪಂಢರ ಪುರವಾಸ ಪಾಲಿಸೋ ಶ್ರೀಶ।।ಪ।। ಶ್ರೇಷ್ಠ ಭಕ್ತನು ಕೊಟ್ಟ ಇಟ್ಟಿಕಲ್ಲಿನ ಮ್ಯಾಲೆ। ಗಟ್ಯಾಗಿ ನಿಂತಿದ್ದ ವಿಠೋಬ ದಯಮಾಡೋ।।1।। ಪಾಂಡುರಾಯನ ಸುತ ಗಾಂಡೀವರ್ಜುನ ದೂತ। ಬಂಡಿ ನಡೆಸಿದಾತ ಪುಂಡರೀಕವರದನೀತ।।2।। ಮುಕುತಿ ದಾಯಕ ಮುದ್ದು ರುಕುಮಿಯ ರಮಣನೆ। ಭಕುತ ವತ್ಸಲಯೆನಗೆ ಸಕಲಾಭೀಷ್ಟವ ನೀಡೊ।।3।। ಬುಕ್ಕಿಟ್ಟು ತುಳಸಿಮಾಲೆ ಕಟ್ಟಿಕೊರಳಿಗೆ ಹಾಕಿ। ಅಪ್ಪಿಕೊಂಡರೆ ಸಾಯುಜ್ಯ ಕೊಡುವ ದಾತ।।4।। ಲೋಕ ಲೋಕದೊಳಗಿದ್ದಾನೇಕ ಜೀವರನೆಲ್ಲ ಸಾಕಿ ಸಾಕಾಯ್ತೆ ಕರವೇಕೆ ಟೊಂಕದಲ್ಲಿಟ್ಟು।।5।। ಸೃಷ್ಟಿಸ್ಥಿತಿಯು ಜನಸಂರಕ್ಷಣೆಮಾಡಿ ನಿನ್ನ। ರಟ್ಟೆ ಸೋತವೆ ಟೊಂಕಕಿಟ್ಟು ಕಯ್ಯನುನಿಂತೆ।।6।। ಕಂಬದೊಳಗೆ ನಿಂತ ಪುರಂದರ ದಾಸರು। ವಂದನೆ ಮಾಡೆ ಇವರೆ ನಾರದರೆಂದು ನಾ ತಿಳಿದೆ।।7।।ರುಕ್ಮಿಣೆ ಸತ್ಯಭಾಮೆ ರಾಧೆ ಲಕ್ಷುಮಿಯೇರ ಹತ್ತಿರ ನಿಂತ ನಮ್ಮಪ್ಪ ವೆಂಕಟರಮಣ।।8।। ಭೀಮರಥಿಯ ಸ್ನಾನ ಸ್ವಾಮಿ ನಿಮ್ಮ ದರುಶನ। ಭೀಮೇಶ ಕೃಷ್ಣನ ಧ್ಯಾನ ಮಾಡುವೊದ್ವೈಕುಂಠಸ್ಥಾನ।।9।।

### ಪಾಂಡುರಂಗ ತತ್ಪಾದ

ಪಾಂಡುರಂಗ ತತ್ಪಾದ ಪಾಲಿಸಯ್ಯ। ಕರುಣಾದಿಪಿಡಿಕೈಯ್ಯಾ।।ಪ।। ಪುಂಡಲೀಕ ಮುನಿ ವರದ ನಮಿಪೆ ನಿನಗೆ। ನೀ ತ್ವರಿತದಲೆನಗೆ।।ಅ.ಪ।। ವನಜ ಭವಾದಿ ಸಮಸ್ತ ಸುರವ್ರಾತ। ವಂದಿತ ಶ್ರೀನಾಥ। ಪ್ರಣತಾರ್ಥಿ ಹರನೆ। ಕಾಮಿತ ಫಲದಾತಾ। ಮುನಿಗಣ ಸಂಧ್ಯಾತಾ। ನೆನೆವ ಜನರ ಮನದೊಳಗಿಹವಿಖ್ಯಾತಾ। ಭುವನಾದಿ ನಾಥ। ಘನ್ನಮಹಿಮ ಒಲಿದು ಪಾಲಿಸೆನ್ನ ಮಾತಾ। ದಯಮಾಡಿ ತ್ವರಿತ।।1।। ಸುರಚಿರಮಹಿಮನೆ ಭಜಕರ ಕಾಮಧೇನು। ವಸುದೇವನ ಸೂನು। ಧರಣಿಯೊಳಗೆ ನಮ್ಮ ಹಿರಿಯರನುದ್ಧಾರ ಮಾಡಿದ್ಯೋ ಗಂಭೀರಾ। ದೊರೆಯೇ ನಿನ್ಹೊರೆತನ್ಯರ ನಾನರಿಯೇ। ಕೇಳೆಲೊ ನರಹರಿಯೇ। ಕರಕರಿ ಭವದೊಳು ಬಿದ್ದು ಬಾಯ ಬಿಡುವೆ ಪೊರೆ ಎಂದು ನುಡಿವೆ।।2।। ಬಂದ ಜನರ ಭವ ಸಾಗರ ಪರಿಮಿತಿ। ತೋರಿಸುತಿಹ ರೀತಿ ಚೆಂದದಿಂದ ಕರವಿಟ್ಟು

ಕಟಿಗಳಲ್ಲಿ। ಈ ಸುಕ್ಷೇತ್ರದಲಿ। ನಿಂದಿಹ ಭೀಮಾತೀರ ಚಂದ್ರಭಾಗಾ। ಅಲ್ಲಿಯ ವೈಭೋಗಾ। ತಂದೆ ಶ್ರೀ ಪತಿವಿಠ್ಠಲ ಸುಖಸಿಂಧು ಅನಾಥ ಬಂಧೋ ।।3।।

**ಪಂಡರಾಪುರವೆಂಬ ದೊಡ್ಡ** **ರಾಗ: ಶ್ರೀ**

ಪಂಡರಾಪುರವೆಂಬ ದೊಡ್ಡ ನಗರ। ಅಲ್ಲಿ ವಿಠೋಬನೆಂಬ ಒಬ್ಬ ಸಾಹುಕಾರ। ವಿಠೋಬ ನಿರುವುದು ನದಿತೀರ। ಅಲ್ಲಿ ಪಂಡರಿ ಭಜನೆಯ ವ್ಯಾಪಾರ।।ಪ।। ತಂದೆ ತಾಯಿ ಪಾಂಡುರಂಗ। ಬಂಧುಬಳಗವು ಪಾಂಡುರಂಗ। ಭಕ್ತಪೋಷಕ ಪಾಂಡುರಂಗ। ಮುಕ್ತಿಪ್ರದಾಯಕ ಪಾಂಡುರಂಗ।।1।। ಭವಭಯ ಬಂಧನ ಪಾಂಡುರಂಗ। ರುಕ್ಮಿಣಿ ವಲ್ಲಭ ಪಾಂಡುರಂಗ। ಬಂಧವಿಮೋಚನ ಪಾಂಡುರಂಗ। ರಾಧಾರಮಣ ಪಾಂಡುರಂಗ।।2।। ಆಪದ್ಬಾಂಧವ ಪಾಂಡುರಂಗ। ಅನಾಥರಕ್ಷಕ ಪಾಂಡುರಂಗ। ವಿಠೋಬ ರುಕುಮಾಯಿ ಪಾಂಡುರಂಗ। ವಿಠೋಬರುಕುಮಾಯಿ ಪಾಂಡುರಂಗ।।3।। ಜೈ ಜೈ ವಿಠಲ ಪಾಂಡುರಂಗ। ಜಯ ಹರಿ ವಿಠಲ ಪಾಂಡುರಂಗ।। ಜೈಜೈ ವಿಠಲ ಪಾಂಡುರಂಗ। ಜಯಹರಿ ವಿಠಲ ಪಾಂಡುರಂಗ।।4।।

**ಪುಂಡರೀಕ ವರದ ಪಾಂಡುರಂಗ** **ರಾಗ: ಮೋಹನ**

ಪುಂಡರೀಕ ವರದ ಪಾಂಡುರಂಗ। ಹರಿ ಪಂಡರಿನಾಥ ಪಾಂಡುರಂಗ। ಗೋವಿಂದ ಕೇಶವ ಪಾಂಡುರಂಗ। ಹರಿ ಗೋಪಾಲ ಮಾಧವ ಪಾಂಡುರಂಗ। ಬೇಲೂರು ಚೆನ್ನಿಗ ಪಾಂಡುರಂಗ। ಹರಿ ದಾಸರಿಗೊಲಿದೆ ಪಾಂಡುರಂಗ। ವೈಕುಂಠ ನಿಲಯ ಪಾಂಡುರಂಗ। ಹರಿ ಉಡುಪಿ ಶ್ರೀ ಕೃಷ್ಣ ಪಾಂಡುರಂಗ। ಭಕ್ತವತ್ಸಲ ಪಾಂಡುರಂಗ। ಹರಿ ಮುಕ್ತಿಪ್ರದಾಯಕ ಪಾಂಡುರಂಗ। ಶೇಷಶಯನ ಹರಿ ಪಾಂಡುರಂಗ। ವ್ಯಾಸವಿಠಲನುತ ಪಾಂಡುರಂಗ।।

**ಪುರಂದರ ರಂಗ (ಭಜನೆ)**

ಪುರಂದರ ರಂಗ ಹರೇ ವಿಠಲಾ। ಪಂಡರಿರಂಗ ಹರೇ ವಿಠಲಾ।। ನರಹರಿ ರಂಗ ಹರೇ ವಿಠಲಾ। ಮುರಹರ ರಂಗ ಹರೇ ವಿಠಲಾ।।

**ಪಂಡರಾಪುರದೊಳು**

ಪಂಡರಾಪುರದೊಳು ಪಾಂಡುರಂಗ। ಉಡುಪಿಯ ಕೃಷ್ಣ ಪಾಂಡುರಂಗ।।ಪ।। ಅಯೋಧ್ಯೆರಾಮ ಪಾಂಡುರಂಗ। ಅಹೋಬಲ ನರಸಿಂಹ ಪಾಂಡುರಂಗ।।1।। ಗುರುವಾಯೂರ್ ಕೃಷ್ಣ ಪಾಂಡು ರಂಗ। ದ್ವಾರಕನಾಥ ಪಾಂಡುರಂಗ।।2।। ವೇಂಕಟರಮಣ ಪಾಂಡುರಂಗ। ಶ್ರೀರಂಗನಾಥ ಪಾಂಡುರಂಗ।।3।। ಬದರೀನಾಥ ಪಾಂಡುರಂಗ। ಭದ್ರಾಚಲರಾಮನೆ ಪಾಂಡುರಂಗ।।4।। ಮಥುರಾನಾಥ ಪಾಂಡುರಂಗ। ಮೇಲುಕೋಟೆ ಚೆಲುವ ಪಾಂಡುರಂಗ।।5।। ಕಾಶಿಬಿಂದು ಮಾಧವ ಪಾಂಡುರಂಗ। ಕಾಶಿನೆಲೆ ಕೇಶವ ಪಾಂಡುರಂಗ।।6।। ಜಗನಾಥ ಪುರಿಯಲಿ ಪಾಂಡುರಂಗ। ಜಯರಾಮ ವಿಠ್ಠಲನೆ ಪಾಂಡುರಂಗ।।7।।

**ರಾಧೇಶ್ಯಾಮ ಪಾಂಡುರಂಗ** **ರಾಗ: ಯಮನ್‌ಕಲ್ಯಾಣಿ-ಆದಿತಾಳ**

ರಾಧೇಶ್ಯಾಮ ಪಾಂಡುರಂಗ ಪುರಂದರ ವಿಠಲೇ ರಕುಮಾಯಿ ಪಾಂಡುರಂಗ ಪುರಂದರ ವಿಠಲ ರಕುಮಾಯಿ।।ಪ।। ಜಗದೋದ್ಧಾರ ಕರುಣಾಸಾಗರ ವಿಠ್ಠಲೇ ರಕುಮಾಯಿ। ಜಗದೋದ್ಧಾರ ವೇದೋದ್ಧಾರ ವಿಠ್ಠಲೇ ರಕುಮಾಯಿ। ಜಗತ್ ಪಿತಾ ಜಗನ್ನಾಥಾ ದಾತಾ ವಿಠಲೇ ರಕುಮಾಯಿ। ಜಗತ್ ಪಾವನ ಜಗತ್ ಜೀವನ ರಕುಮಾಯಿ।।1।। ಕಮಲ ಲೋಚನ ಕಮಲ ನಾಭಿಯುತ ವಿಠ್ಠಲೇ ರಕುಮಾಯಿ। ಕಮಲ ಪತಯೇ ಕಮಲಾಕ್ಷ ಹರಿ ವಿಠ್ಠಲೇ ರಕುಮಾಯಿ। ಕಮಲಾ ಮುಖಕರ ಕಮಲಯುಗಳ ಹರಿ ವಿಠ್ಠಲೇ ರಕುಮಾಯಿ। ಕಮಲಾ ಪಾದ ಕಮನೀಯ ಮೂರ್ತಯೆ ವಿಠ್ಠಲೆ

ರಕುಮಾಯಿ॥2॥ ಪುರಂದರದಾಸ ಸುಪೂಜಿತ ಪದಯುಗ ವಿಠ್ಠಲೇ ರಕುಮಾಯಿ। ಪುರಂದರ ವಿಠಲ ಪಾಂಡುರಂಗ ಹರಿ ವಿಠ್ಠಲೇ ರಕುಮಾಯಿ। ಪುರಂದರ ಮಂದಿರ ವಾಸಿ ಪುರಂದರ ವಿಠ್ಠಲೇ ರಕುಮಾಯಿ। ಪುರಂದರಪುರ ಚಿರವಾಸಿದಯಾನಿಧಿ ವಿಠಲೇ ರಕುಮಾಯಿ॥3॥ ಕೇಶವ ಅಚ್ಯುತ ಸುಪೂಜಿತ ವಿಠ್ಠಲೇ ರಕುಮಾಯಿ। ದಾಸ ಹೃದಯ ಮಂದಿರ ನಿವಾಸಿ ಹರಿ ವಿಠ್ಠಲೇ ರಕುಮಾಯಿ। ವಾಸುದೇವ ವಾರಿಧಿ ಶಯನ ಹರಿ ವಿಠ್ಠಲೇ ರಕುಮಾಯಿ। ದಾಸ ಕೇಶವನುತ ದಾಸಾಂತರ್ಗತ ವಿಠ್ಠಲೇ ರಕುಮಾಯೀ॥4॥ ವಿಠ್ಠಲೇ ರಕುಮಾಯಿ ವಿಠ್ಠೋಬ ರಕುಮಾಯಿ। ವಿಠ್ಠಲೇ ರಕುಮಾಯಿ ಜಯಜಯ ವಿಠ್ಠಲೇ ರಕುಮಾಯಿ॥

### ಮಾತಾಪಿತನೆ ಪಾಂಡುರಂಗ

ಮಾತಾಪಿತನೆ ಪಾಂಡುರಂಗ। ಬಂಧು ಗುರು ಪಾಂಡುರಂಗ। ತಲ್ಲಿತಂಡ್ರಿವಿ ಪಾಂಡುರಂಗ। ಬಂಧು ಗುರು ಪಾಂಡುರಂಗ॥ಪ॥ ತಂದೆ ತಾಯಿ ಪಾಂಡುರಂಗ। ಬಂಧು ಬಳಗ ಪಾಂಡುರಂಗ। ಸ್ನೇಹಸಖ ಪಾಂಡುರಂಗ। ಬಂಧುಗುರು ಪಾಂಡುರಂಗ॥1॥ ಪರಮ ಪವಿತ್ರ ಪಾಂಡುರಂಗ। ಪಾವನ ಪುರುಷ ಪಾಂಡುರಂಗ। ದೀನದಾತ ಪಾಂಡುರಂಗ। ದಯಾಸಿಂಧು ಪಾಂಡುರಂಗ॥2॥ ಮತ್ಸ್ಯಾವತಾರ ಪಾಂಡುರಂಗ। ಕೂರ್ಮವತಾರ ಪಾಂಡುರಂಗ। ವರಹಾವತಾರ ಪಾಂಡುರಂಗ। ವಾಮನಮೂರ್ತಿ ಪಾಂಡುರಂಗ॥3॥ ನರಸಿಂಹಾವತಾರ ಪಾಂಡುರಂಗ। ಭಾರ್ಗವರಾಮ ಪಾಂಡುರಂಗ। ರಾಮಾವತಾರ ಪಾಂಡುರಂಗ। ಕೃಷ್ಣಾವತಾರ ಪಾಂಡುರಂಗ॥4॥ ಬೌದ್ಧಾವತಾರ ಪಾಂಡುರಂಗ। ಕಲ್ಕ್ಯಾವತಾರ ಪಾಂಡುರಂಗ। ದಶಾವತಾರ ಪಾಂಡುರಂಗ। ದೀನಾವತಾರ ಪಾಂಡುರಂಗ॥5॥ ವಿಠ್ಠಲ ವಿಠ್ಠಲ ಪಾಂಡುರಂಗ। ಜಯಹರಿ ವಿಠ್ಠಲ ಪಾಂಡುರಂಗ। ಸಚ್ಚಿದಾನಂದ ಪಾಂಡುರಂಗ। ನಿತ್ಯಾನಂದ ಪಾಂಡರಂಗ॥6॥

### ರಂಗ ರಂಗ ರಂಗಹರಿ ರಾಗ: ಯಮನ್

ರಂಗ ರಂಗ ರಂಗಹರಿ ಪಾಂಡುರಂಗ ವಿಠಲ॥2ಸಾರಿ॥ ಜೈ ಪಾಂಡುರಂಗ ವಿಠಲ॥ ಬಡವರಿಗೊಡೆಯನೆ ಪಾಂಡುರಂಗ ವಿಠಲ। ಭಕ್ತಮಂದಾರನೆ ಪಾಂಡುರಂಗ ವಿಠಲ। ಭಾಮಾಲೋಲಾ ಪಾಂಡುರಂಗ ವಿಠಲ। ಶ್ಯಾಮಸುಂದರನೆ ಪಾಂಡುರಂಗ ವಿಠಲ। ದೀನನಾಥ ಪಾಂಡುರಂಗ ವಿಠಲ। ದೀನೋದ್ಧಾರ ಪಾಂಡುರಂಗ ವಿಠಲ। ಮುಕ್ತಿಪ್ರದಾಯಕ ಪಾಂಡುರಂಗ ವಿಠಲ। ಭಕ್ತಿಪ್ರದಾಯಕ ಪಾಂಡುರಂಗ ವಿಠಲ। ರುಕ್ಮಿಣಿ ವಲ್ಲಭ ಪಾಂಡುರಂಗ ವಿಠಲ। ಅಕಳಂಕ ಚರಿತನೆ ಪಾಂಡುರಂಗ ವಿಠಲ। ಮುರುಳೀಧರ ಶ್ರೀ ಪಾಂಡುರಂಗ ವಿಠಲ। ಹರಿವಿಠಲೇಶನೆ ಪಾಂಡುರಂಗ ವಿಠಲ॥

### ಗೋವಿಂದ ರಂಗಾ ವಿಠಲ

ಗೋವಿಂದ ರಂಗಾ ವಿಠಲ। ರಾಜಗೋಪಾಲ ರಂಗವಿಠಲ॥ಪ॥ ರಂಗಾ ರಂಗಾ ವಿಠಲ ಜಯ। ಪಾಂಡುರಂಗ ವಿಠಲ॥ಅ.ಪ॥ ತಂದೆ ವಿಠಲ। ತಾಯಿವಿಠಲ। ತಂದೆ ತಾಯಿ ವಿಠಲ ವಿಠಲ॥1॥ ಮುರಹರ ವಿಠಲ ನರಹರಿ ವಿಠಲ। ಮುರಹರ ನರಹರಿ ವಿಠಲ ವಿಠಲ॥2॥ ಒಳಗೂ ವಿಠಲ ಹೊರಗೂ ವಿಠಲ। ಒಳಗೂ ಹೊರಗೂ ವಿಠಲ ವಿಠಲ॥3॥

### ಪಂಕಜಲೋಚನ ಪಂಡರಿನಾಥಾ

ಪಂಕಜಲೋಚನ ಪಂಡರಿನಾಥಾ। ಪಾಂಡವ ಪ್ರಿಯಸದಯಾ ನಿರಾಮಯ॥ಪ॥ ರಾಗಾದಿಗಳ ಬೇಗೆಯನುಳಿದು। ತನು ತಾನೆಂಬುವ ಮತಿಯಳಿದು। ಸುಜ್ಞಾನನಂದವ ನೀಡುತೆ ಜಗಕೆ। ಯೋಗಿರೂಪದಿ ಬಾಳಲು ಎಂದು। ವೇದ ಶಿಶುಗಳನಾದರಿಸಿ। ಮೇರುಗಿರಿಯ ಬೆನ್ನಿಲಿ ಧರಿಸಿ। ಮೇದಿನಿಯ ಸಾಗರ ದಿಂದುಳಿಸಿ। ದಾನವಾರಿ ನರಹರಿಯೆನಿಸಿ। ದಾನಬೇಡಿ ಬಲಿರಾಜ್ಯವಗಳಿಸಿ। ಸೊಕ್ಕಿದ ಕ್ಷತ್ರಿಯ ಕುಲ ತುಳಿದ। ರಾವಣಹರ ಸೀತಾವರ ಶುಭಕರ। ಯದುಕುಲಮಣಿಗೌತಮ ಕಲಿಕುಲಘಣಿ॥

**ದೇವದಾನವರೆಲ್ಲ ಸಾಗರವ** **ರಾಗ: ಆನಂದಭೈರವಿ-ಆದಿತಾಳ**

ದೇವದಾನವರೆಲ್ಲ ಸಾಗರವ ಮಥಿಸಲು। ಅಮೃತ ಕಳಶವು ಉದಿಸಿ ಬರಲು। ಇಂದ್ರ ತಾನಾದನು ದೇವಲೋಕಕೆಂದು। ಒಯ್ಯುತಿರಲಾಗಿ ಕಳಶ ತುಳುಕಿ। ಕಳಶದಿಂ ಬಿಂದುಗಳು ಈ ಧರೆಗೆ ಬೀಳಲು। ಬೆಳೆದವು ಆ ಸ್ಥಳದಿ ಶ್ರೀತುಳಸಿ ಪಾರಿಜಾತ ವೃಕ್ಷ। ಸತ್ಯಜಿತುವೆಂಬ ಶೂದ್ರ ತಾನದ ಕಂಡು। ಮಾಡಿದನು ಅಲ್ಲೊಂದು ತೋಟವನ್ನು।। ತೋಟದ ಫಲಪುಷ್ಪ ಮಾರಿ ಜೀವನ ಗೈಯ್ವ। ದಿನನಿತ್ಯ ಜೀವನಕೆ ದಾರಿಯಿದುವೆ। ಇಂದ್ರನೊಮ್ಮೆ ತಾನು ಯುದ್ದಕ್ಕೆ ಹೊರಟಿರಲು। ಮಾರ್ಗ ಮದ್ಯದಿ ತೋಟ ಕಂಡು ಬೆರಗಾದ। ಯುದ್ಧ ಮುಗಿಸಿತಾ ಹಿಂದಿರುಗುವಾ ಸಮಯದಿ। ಪಾರಿಜಾತದ ಸುಮಗಳನ್ನು ಕೊಂಡೊಯ್ದನು।। ಹೂಗಳ ಸೊಬಗಿಗೆ ಮನಸೋತು ಶಚಿದೇವಿ। ದಿನನಿತ್ಯ ಹೂ ತನಗೆ ಬೇಕೆಂದಳು।ಸತಿಯ ಮಾತನು ಕೇಳಿ ದೇವದೂತನ ಕರೆದು। ಗುಹ್ಯಕ ದಿನ ನಿತ್ಯ ಈ ಹೂ ತಾರೆಂದನು। ಅಂತೆ ಗುಹ್ಯಕ ತಾನು ದಿನ ನಿತ್ಯ ಹೂ ತರಲು। ಸತ್ಯಜಿತ್ತು ದಿನವೂ ಹೂ ಕಾಣದೆ ಕಂಗೆಟ್ಟನು।। ಒಂದು ದಿನ ರಾತ್ರಿ ತಾ ಕಾವಲು ಕಾಯುತ್ತ। ಹೂ ಕೀಳ ಬಂದ ಗುಹ್ಯಕನ ಹಿಡಿಯಲಾಗಿ। ದೈವಶಕ್ತಿಯಿಂದ ಬಿಡಿಸಿಕೊಂಡು ತಾನು। ದೇವಲೋಕಕೆ ಹೂ ಒಯ್ದನು। ಸತ್ಯಜಿತ್ತು ಯೋಚಿಸಿ ಉಪಾಯವನು ಹೂಡಿ। ದೇಗುಲದ ನಿರ್ಮಾಲ್ಯ ಹೂ ತಂದನು। ಪಾರಿಜಾತ ಗಿಡದ ಮೇಲೆ ಕೆಳಗೆಲ್ಲೆಡೆ। ನಿರ್ಮಾಲ್ಯದ ಹೂವ ಚೆಲ್ಲಾಡಿದ।। ನಿತ್ಯದಂತೆ ಬಂದ ಗುಹ್ಯಕನು ಅರಿಯದೆ। ಹೂ ಕೀಳುವಾಗ ನಿರ್ಮಾಲ್ಯ ದಾಟಿ, ತುಳಿದ। ಅದರ ಫಲವಾಗಿ ತಾ ಕಾಲು ಊನನಾಗಿ। ಮರದಿಂದ ದೊಪ್ಪೆಂದು ಕೆಳಗೆ ಬಿದ್ದ।। ಎಷ್ಟು ಹೊತ್ತಾದರೂ ಗುಹ್ಯಕನು ಬಾರದಿರಲು। ಮತ್ತೆ ನಾಲ್ವರು ದೂತರನ್ನು ಅಟ್ಟಿದ। ಅವರೂ ಕೂಡ ಅರಿಯದೆ ನಿರ್ಮಾಲ್ಯವನು ತುಳಿದು। ಕಾಲು ಊನರಾಗಿ ಬಿದ್ದರಲ್ಲೆ। ಎಷ್ಟು ಹೊತ್ತಾದರೂ ಇವರ ಸುಳಿವರಿಯದೆ। ಇಂದ್ರ ತಾ ಬಂದನು ಅಷ್ಟ ದಿಕ್ಪಾಲಕರೊಡನೆ। ಇವರ ಈ ಪರಿ ಕಂಡು ಕೋಪಗೊಂಡು ತಾನು। ಪಾರಿಜಾತದ ವೃಕ್ಷವನೆ ಕೊಂಡೊಯ್ಯಲು ಯೋಚಿಸಿ। ವೃಕ್ಷವನ್ನು ಕೀಳಲೆಂದು ತಾನು ನಿರ್ಮಾಲ್ಯ ತುಳಿದೊಡನೆ। ಅಲ್ಲೇ ಬಿದ್ದರೆಲ್ಲ ಅಂಗ ಊನರಾಗಿ। ದೈವತ್ವ ಕಳಕೊಂಡು ಪರಿಪರಿಯ ಸಂಕಟದಿ ಬಳಲುತಿಹರು। ಮಾರನೆ ದಿನ ಬರಲು ಸತ್ಯಜಿತ್ತು ಕಂಡನು। ನರಳುತ್ತ ಬಳಲಿ ಬಿದ್ದ ದೇವಗಣವ। ಮನನೊಂದು ಕರುಣೆಯಿಂ ತನ್ನ ತಪ್ಪನರಿತುತಾ। ಮನೆಗ್ಹೋಗಿ ವಿಷಯವನು ಸತಿಗರುಹಿದ।। ನಿರಾಹಾರರಾಗಿ ಶುದ್ಧ ಚಿತ್ತದಿಂದ ಶ್ರೀಪತಿಯ ಪೂಜೆಯನು। ನಿಷ್ಠೆಯಿಂದ ಮಾಡತೊಡಗಿದರು। ಏಕಾದಶಿ ದಿನ ರಾತ್ರಿ ಪ್ರಥಮ ಜಾವದಲ್ಲಿ। ಶ್ರೀಹರಿಯು ದರ್ಶನವ ಅವರಿಗಿತ್ತ। ನಾಲ್ಕು ಯಾಮದ ಪೂಜೆಯನ್ನವರಿಂದ ಮಾಡಿಸಿ। ದ್ವಾದಶಿ ದಿನದಂದು ಬ್ರಾಹ್ಮಣ ಭೋಜನ ಮಾಡಿಸಿ। ಗುಹ್ಯಕ ಅವರೊಡಗೂಡಿ ತೋಟಕೆ ಬಂದು ತಾ। ಕಂಡನು ದೇವಗಣ ಪಡುವ ಆ ವೇದನೆ। ನರಳುತ್ತ ಬಿದ್ದಿರುವ ದೇವಗಣವಾ ಕಂಡು। ದ್ವಾದಶಿ ಊಟವನು ಅವರಿಗೀಯೆಂದನು। ಸತ್ಯಜಿತ್ತುವು ತಾನು ಅಡಿಗೆಯ ಮಾಡಿ ತಾ। ಆದರಿಸಿ ಉಪಚರಿಸಿ ಊಟವನಿತ್ತನು। ಸತ್ಯಜಿತ್ತು ತುಳಸಿಯನು ಎನಗೆ ದಾನವ ನೀಡು। ಪಾರಿಜಾತ ವೃಕ್ಷವನು ಇಂದ್ರನಿಗೀಯೆಂದ ಕೃಷ್ಣ। ಎಂದೆನುತ ಶ್ರೀಹರಿ ನಿಜರೂಪ ತೋರುತ। ವರವಿತ್ತು ದೇವತೆಗಳಿಗೆ ಅಭಯವಿತ್ತು। ಹರಿಯ ದರ್ಶನದಿಂ ಸುರರು ಗುಣ ಪಡೆದರು। ಮೊದಲಿನಂತೆ ದೈವ ಶಕ್ತಿಯನೆಲ್ಲರು। ವಂದಿಸಿ ಶ್ರೀಹರಿಗೆ ಎಲ್ಲರೂ ಮುದದಿಂದ। ಏಕಾದಶಿ ವ್ರತ ಮಹಿಮೆ ತಿಳಿದರಂದು। ಗರುಡರೂಢನಾಗಿ ಲಕ್ಷ್ಮೀ ಸಮೇತನಾಗಿ। ಶ್ರೀಹರಿ ಕರೆದೊಯ್ದ ಸತ್ಯಜಿತ್ತು ದಂಪತಿಗಳ ವೈಕುಂಠಕೆ। ಆಶಾಢ ಶುದ್ಧ ಪಾಡ್ಯಮಿ ಮೊದಲಿಂದ। ಏಕಾದಶಿ ದ್ವಾದಶಿ ದಿನದವರೆಗೂ। ನಡೆದಂತೆ ಈ ಘಟನೆಗಳನ್ನು ತಿಳಿಯಿರಿ। ಭಕ್ತ ಜನ ನೀವೆಲ್ಲ ಭಕ್ತಿಯಿಂದ। ಆಡಿದ ಪಾಪವು ಮಾಡಿದ ಪಾಪವು ಎಲ್ಲ ಪಾಪವು। ಕಳೆದು ವೈಕುಂಠ ಪ್ರಾಪ್ತಿ। ಈ ವ್ರತ ಮಹಿಮೆಯಿಂದ। ಜಯಮಂಗಳ ನಿತ್ಯ ಶುಭಮಂಗಳ। ಹರಿಗೆ ಜಯ ಜಯ ಮಂಗಳ ಶ್ರೀಹರಿಗೆ।।

### ಮುಯ್ಯಕ್ಕ ಮುಯ್ಯ ತೀರಿತೋ

ಮುಯ್ಯಕ್ಕ ಮುಯ್ಯ ತೀರಿತೋ। ಜಗದಯ್ಯ ವಿಜಯ್ಯ ಸಹಯ್ಯ ಪಂಢರಿರಾಯಾ।।ಪ।। ಸಣ್ಣವನೆಂದು ನಾನೀರ ತಾರೆಂದರೆ। ಬೆಣ್ಣೆ ಕಳ್ಳ ಕೃಷ್ಣ ಮರವೆಮಾಡಿ। ಚಿನ್ನದ ಗಿಂಡಿಲಿ ನೀರು ತಂದಿಟ್ಟರೆ। ಕಣ್ಣು ಕಾಣದೆ ನಾ ಹೊಡೆದೆ ಪಂಢರಿರಾಯ।।1।। ಎನ್ನ ಹೆಸರು ಮಾಡಿ ಸೂಳೆಗೆ ಕಂಕಣ। ವನ್ನು ನೀನಿತ್ತೆ ನಿಜರೂಪದಿ। ಎನ್ನ ಪೀಡಿಸಿ ಪರಮ ಭಂಡನ ಮಾಡಿ। ನಿನ್ನ ಮುಯ್ಯಕ್ಕೆ ಮುಯ್ಯ ತೀರಿಸಿಕೊಂಡೆ।।2।। ಭಕ್ತವತ್ಸಲನೆಂಬೊ ಬಿರುದು ಬೇಕಾದರೆ। ಭಕ್ತರಾಧೀನನಾಗಿರ ಬೇಡವೇ। ಯುಕ್ತಿಯಲಿ ನಿನ್ನಂಥ ದೇವರ ಕಾಣೆ। ಮುಕ್ತೀಶ ಪುರಂಧರ ವಿಠಲ ಪಂಢರಿರಾಯ।।4।।

### ನಾ ಡೊಂಕಾದರೆ ನಿನ್ನ ನಾಮ ಡೊಂಕೇ ವಿಠಲ — ರಾಗ: ಕಾಮಾಚ್

ನಾ ಡೊಂಕಾದರೆ ನಿನ್ನ ನಾಮ ಡೊಂಕೇ ವಿಠಲ।।ಪ।। ನದಿಯು ಡೊಂಕಾದರೆನು। ಉದಕ ಡೊಂಕೇ ವಿಠಲ।।1।। ಹಾವು ಡೊಂಕಾದರೆನು। ವಿಷವು ಡೊಂಕೇ ವಿಠಲ।।2।। ಪುಷ್ಪ ಡೊಂಕಾದರೇನು। ಪರಿಮಳ ಡೊಂಕೇ ವಿಠಲ।।3।। ಆಕಳು ಡೊಂಕಾದರೇನು ಹಾಲು ಡೊಂಕೆ ವಿಠಲ।।4।। ಬಿಲ್ಲು ಡೊಂಕು ಆದರೇನು। ಬಾಣ ಡೊಂಕೇ ವಿಠಲ।।5।। ನಾ ಹೊಲೆಯನಾದರೇನು ನಿನ್ನ ನಾಮ ಡೊಂಕೇ ವಿಠಲ।।6।। ಅಜ್ಞನೆಂದು ಕಾಯೊ ಎನ್ನ ಸುಜ್ಞ ಪುರಂಧರ ವಿಠಲ।।7।।

### ನಾ ನಿನ್ನ ಮನಕೆ ಬಾರೆನೇ ಜಯ ಪಾಂಡುರಂಗಾ

ನಾ ನಿನ್ನ ಮನಕೆ ಬಾರೆನೇ ಜಯ ಪಾಂಡುರಂಗಾ।।ಪ।। ನಾನಿನ್ನ ಮನಕೆ ಬಾರೆ। ಬಂದರೆ ಈ ಭವದ। ಬಲೆಯೊಳು ಸಿಲುಕುವೆನು। ಜಯ ಪಾಂಡುರಂಗಾ।।1।। ಅತಿ ಭ್ರಷ್ಟ ಅಜಮಿಳನ ಅಂತ್ಯಸಮಯದಲ್ಲಿ। ಅಂತಕನ ಬಾಧೇ ಬಿಡಿಸಿದೇ। ಜಯ ಪಾಂಡುರಂಗಾ।।2।। ಎಲ್ಲರನುದ್ಧರಿಸಿದೆಯೋ ಪುರಂಧರ ವಿಠಲನೇ। ಏಕೆ ನೀ ಎನ್ನ ಮರೆತೆಯೋ। ಜಯ ಪಾಂಡುರಂಗಾ।।3।।

### ಮನವೆನ್ನ ಮಾತು ಕೇಳದೋ ಕಣೋ — ರಾಗ: ಕಾನಡಾ

ಮನವೆನ್ನ ಮಾತು ಕೇಳದೋ ಕಣೋ ವಿಠ್ಠಲ। ಮನಸಿಜನಾಯಾಸ ಘನವಾಯ್ತೋ ವಿಠ್ಠಲ।।ಪ।। ನಿನಗಲ್ಲದಪಕೀರ್ತಿ ಎನಗೇಕೋ ವಿಠ್ಠಲ। ತನುಮನದೊಳಗನುದಿನವಿರು ವಿಠ್ಠಲ। ಜಯತು  ಜಯತು ಜಯವೆಂಬೆನೋ ವಿಠ್ಠಲ। ಬಂಗಾರ ಭಂಡಾರ ಬಯಸೇನೋ ವಿಠ್ಠಲ।।1।। ಮಂಗಳ ಕೊಡು ಎನ್ನ ಬುದ್ಧಿಗೆ ವಿಠ್ಠಲ। ರಂಗರಂಗನೆಂಬ ನಾಮದಿ ವಿಠ್ಠಲ। ಭಂಗವ ಪರಿಹರಿಸಯ್ಯ ನೀ ವಿಠ್ಠಲ।। ಜಯತು ಜಯತು ಜಯವೆಂಬೆನೋ ವಿಠ್ಠಲ।।2।। ಏನು ಬಂದರು ಬರಲೆಂದಿಗು ವಿಠ್ಠಲ। ಮಾನಾಪಮಾನ ನಿನ್ನದುಕಣೋ ವಿಠ್ಠಲ। ನಾನು ನಿನ್ನವನೆಂದು ಸಲಹಯ್ಯ ವಿಠ್ಠಲ। ಜ್ಞಾನಿಗಳರಸ ಪಂಡರಿನಾಥ ವಿಠ್ಠಲ।।3।।

### ವಿಠ್ಠಲ ಸಲಹೋ ಸ್ವಾಮಿ

ವಿಠ್ಠಲ ಸಲಹೋ ಸ್ವಾಮಿ। ನಮ್ಮ ವಿಠ್ಠಲ ಜಗದಂತರ್ಯಾಮಿ।।ಪ।। ಎಡಕೆ ವಿಠ್ಠಲ ಬಲಕೆ ವಿಠ್ಠಲ ಎಡಬಲಕೆ ವಿಠ್ಠಲ।।1।। ತಂದೆ ವಿಠ್ಠಲ ತಾಯಿ ವಿಠ್ಠಲ। ತಂದೆತಾಯಿ ವಿಠ್ಠಲ।।2।। ಬಂಧು ವಿಠ್ಠಲ ಬಳಗವಿಠ್ಠಲ। ಬಂಧು ಬಳಗ ವಿಠ್ಠಲ।।3।। ಹಗಲು ನಿನ್ನ ನೆನೆಯಲಿಲ್ಲ ಹಸಿವೆ ತೃಷೆಯಿಂದ। ಇರುಳು ನಿನ್ನ ನೆನೆಯಲಿಲ್ಲ ನಿದ್ರೆ ಭರದಿಂದ ಇವೆರಡರ। ಬಾಧೆಗೆ ನಾ ಒಳಗಾದೆ ಪುರಂಧರ ವಿಠಲಾ।।4।।

### ನಾಹಂ ವಸಾಮಿ ವೈಕುಂಠೆ ನ (ಶ್ಲೋಕ)

ನಾಹಂ ವಸಾಮಿ ವೈಕುಂಠೆ ನ ಯೋಗಿ ಹೃದಯೇರವೌ। ಮದ್ಭಕ್ತಾಯ ಯತ್ರ ಗಾಯಂತೇ ತತ್ರ ತಿಷ್ಠಾಮಿ ನಾರದ।।

### ಮಹಾಯೋಗಪೀಠೇ ತಟೇ (ಪಾಂಡುರಂಗಾಷ್ಟಕಂ)

ಮಹಾಯೋಗಪೀಠೇ ತಟೇ ಭೀಮರಥ್ಯಾ। ವರಂ ಪುಂಡರೀಕಾಯ ದಾತುಂ ಮುನೀಂದ್ರೈಃ। ಸಮಾಗತ್ಯ ತಿಷ್ಠಂತ ಮಾನಂದ ಕಂದಂ। ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಂ।। ತಟಿದ್ವಾಸಸಂ ನೀಲಮೇಘಾವ ಭಾಸಂ। ರಮಾಮಂದಿರಂ ಸುಂದರಂ ಚಿತ್ಪ್ರಕಾಶಂ। ವರಂ ತ್ವಿಷ್ಟಕಾಯಾಂ ಸಮಂಸ್ಯಸ್ತ ಪಾದಂ। ಪರ ಬ್ರಹ್ಮಲಿಂಗಂ ಭಜೇ ಪಾಂಡುರಂಗಂ।। ಪ್ರಮಾಣಂ ಭವಾಬ್ಧೇರಿದಂ ಮಾಮಕಾನಾಂ। ನಿತಂಬಃ ಕರಾಭ್ಯಾಂ ಧೃತೋ ಯೇನ ತಸ್ಮಾತ್। ವಿಧಾತು ರ್ವಸತ್ಯೈ ಧೃತೋ ನಾಭಿಕೋಶಃ। ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಂ।। ಸ್ಫುರತ್ ಕೌಸ್ತುಭಾ ಲಂಕೃತಂ ಕಂಠದೇಶೇ। ಶ್ರಿಯಾ ಜುಷ್ಟಕೇಯೂರಕಂ ಶ್ರೀನಿವಾಸಂ। ಶಿವಂ ಶಾಂತಮೀಡ್ಯಂ ವರಂ ಲೋಕಪಾಲಂ। ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಂ।।ಶರತ್ ಚಂದ್ರ ಬಿಂಬಾನನಂ ಚಾರುಹಾಸಂ। ಲಸತ್ಕುಂಡ ಲಾಕ್ರಾಂತ ಗಂಡಸ್ಥಲಾಂ(ಗಂ)ತಂ। ಜಪಾರಾಗ ಬಿಂಬಾಧರಂ ಕಂಜ ನೇತ್ರಂ। ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಂ।। ಕಿರೀಟೋಜ್ವಲತ್ಸರ್ವ ದಿಕ್ಪ್ರಾಂತ ಭಾಗಂ। ಸುರೈರರ್ಚಿತಂ ದಿವ್ಯ ರತ್ನೈಃ ರಸರ್ಘ್ಯೈಃ। ತ್ರಿಭಂಗಾಕೃತಿಂ ಬರ್ಹ ಮಾಲ್ಯಾವ ತಂಸಂ। ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಂ।।ವಿಭುಂ ವೇಣುನಾದಂ ಚರಂತಂ ದುರಂತಂ। ಸ್ವಯಂ ಲೀಲಯೋ ಗೋಪವೇಷಂ ದಧಾನಂ। ಗವಾಂ ಬೃಂದಕಾ ನಂದದಂ ಚಾರುಹಾಸಂ। ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಂ।। ಅಜಂ ರುಕ್ಮಿಣೀ ಪ್ರಾಣ ಸಂಜೀವಿನಂ। ತಂ ಪರಂ ಧಾಮ ಕೈವಲ್ಯಮೇಕಂ ತುರೀಯಂ। ಪ್ರಸನ್ನಂ ಪ್ರಸನ್ನಾರ್ತಿಹಂ ದೇವ ದೇವಂ। ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಂ।। ಸ್ತವಂ ಪಾಂಡುರಂಗಸ್ಯ ವೈ ಪುಣ್ಯದಂ। ಯೇ ಪಠಂತ್ಯೇಕ ಚಿತ್ತೇನ ಭಕ್ತ್ಯಾ ಚ ನಿತ್ಯಂ। ಭವಾಂಭೋನಿಧಿಂ ತೇಪಿ ತೀರ್ತ್ವಾಂತಕಾಲೇ। ಹರೇ ರಾಲಯಂ ಶಾಶ್ವತಂ ಪ್ರಾಪ್ನುವಂತಿ।।

### ಆರತಿಯ ಬೆಳಗಿರೆ ಅರಸಿ ರುಕ್ಮಿಣಿಗೆ (ಆರತಿ) — ರಾಗ: ಶ್ರೀರಾಗ-ಅಟ್ಟತಾಳ

ಆರತಿಯ ಬೆಳಗಿರೆ ಅರಸಿ ರುಕ್ಮಿಣಿಗೆ ಆರತಿ ಬೆಳಗಿರೆ।।ಪ।। ಅರಸಿ ರುಕ್ಮಿಣಿಕೂಡ ಆರಸುವಿಠಲಗೆ। ಬಿರುದಿನ ಶಂಖವ ಪಿಡಿದ ವಿಠಲಗೆ। ಸರಸಿಜಸಂಭವ ಸನ್ನುತ ವಿಠಲಗೆ। ನಿರುತ ಇಟ್ಟಿಗೆ ಮೇಲೆ ನಿಂತ ವಿಠಲಗೆ।।1।। ದಶರಥರಾಯನ ಉದರದಿ ವಿಠಲ। ಶಿಶುವಾಗಿ ಜನಿಸಿದ ಶ್ರೀರಾಮ ವಿಠಲ। ಪಶುಪತಿ ಗೋಪಿಯಕಂದನೆ ವಿಠಲ। ಅಸುರೆ ಪೂತನಿಯ ಕೊಂದ ವಿಠಲಗೆ।।2।। ಕಂಡಿರಾ ಬೊಬ್ಬರ ವೆಂಕಟವಿಠಲನ। ಅಂಡಜವಾಹನ ಅಹುದೊ ನೀ ವಿಠಲ। ಪಾಂಡುರಂಗ ಕ್ಷೇತ್ರ ಪಾವನ ವಿಠಲ। ಪುಂಡರೀಕಾಕ್ಷ ಶ್ರೀ ಪುರಂಧರ ವಿಠಲ।।3।।

### ಮಂಗಳಾರತಿ ರಾಧೇಶ್ಯಾಮನಿಗೆ — ರಾಗ: ಕುರಂಜಿ-ಆದಿತಾಳ

ಮಂಗಳಾರತಿ ರಾಧೇಶ್ಯಾಮನಿಗೆ। ಮಂಗಳಾರತಿ ಪಾಂಡುರಂಗನಿಗೆ।।ಪ।। ಪೂತನಿ ಮರ್ದನ ಶಕಟ ಭಂಜನಿಗೆ ಮಾತೆಗೆ ಬಾಯೊಳು ವಿಶ್ವ ತೋರಿದಗೆ ನಿರತದಲಿ ಭಕ್ತರಿಷ್ಟಾರ್ಥವ ಸಲಿಸುವ ಮಾತುಲ ಧ್ವಂಸಿ ಶ್ರೀಗೀತಾಚಾರ್ಯನಿಗೆ।।1।। ಜ್ಞಾನದೇವನ ಧ್ಯಾನ ಗಮ್ಯನಾದವಗೆ ಮಾನವ ವೇಷ ಪುಂಡಲೀಕ ವರದಗೆ ಸಾನುರಾಗದಿ ನಾಮದೇವಗೊಲಿದವಗೆ ದೀನ ರಕ್ಷಕ ರುಕ್ಮಿಣೀ ಪತಿ ವಿಠಲಗೆ।।2।। ಕಾಶಿ ಮಠವಾಸ ವ್ಯಾಸ ರಘುಪತಿಗೆ ದಾಸರಿಗೊಲಿದ ಭದ್ರಗಿರಿ ವಿಠಲಗೆ ಶೇಷಗಿರಿಯವಾಸ ವೆಂಕಟರಮಣಗೆ ದಾಸ ಕೇಶವನುತ ರಾಧೇಶ್ಯಾಮಗೆ ।।3।।



## 24. ಭೀಮನ ಅಮಾವಾಸ್ಯೆ

### ಪೂಜಿಪೆ ನಿಮ್ಮನು — ರಾಗ: ಹಂಸಧ್ವನಿ

ಪೂಜಿಪೆ ನಿಮ್ಮನು। ಪಾಲಿಸು ಎನ್ನನು। ನೆರೆ ನಂಬಿದವರನು। ಕೈ ಬಿಡದೆ ಕಾಯೆ ನೀ।।ಪ।। ಅರಿಶಿನ ಕುಂಕುಮ ಅಕ್ಷತೆ ಗಂಧವು। ಮರುಗ ಮಲ್ಲಿಗೆಯು ಸುರಗಿ ಸೇವಂತಿಗೆ।।1।। ಕದಳಿ ಖರ್ಜೂರವು ದಾಳಿಂಬೆ ದ್ರಾಕ್ಷಿಯು। ನಾರಿ ಕೇಳಫಲಂಗಳನು ನೈವೇದ್ಯ ಮಾಡುವೆ।।2।। ಗಿರಿರಾಜನ ಪುತ್ರಿಯೆ। ಹರನ ಕಳತ್ರಿಯೆ। ಗಣಪನ ಮಾತೆಯೆ। ಗೀರ್ವಾಣಿಯೆ।।3।।

### ಪೂಜಿಪೆನಾಂ ಪಾಪನಾಶಿನಿ

ಪೂಜಿಪೆನಾಂ ಪಾಪನಾಶಿನಿ। ಪುರಾಣಿವಾಣಿ॥ಪ॥ ಪೂಜಿಪೆನಾಂ ಪೂಗಳಿಂದ ಪೂರ್ಣ ಚಂದ್ರಮೌಳಿ ಸತಿಗೆ। ರಾಜರಾಜಸಖಿನರಾಣಿ। ರಾಜೀವಾಂಬಿಕೇ ಶಿವೇ॥1॥ ಷೋಢ ಶೋಪಚಾರಗಳನು। ಮಾಡಿಭಕ್ತಿಯಿಂದ ನಾನು। ಜೋಡಿಸಿ ಕರವಾಮುಗಿದು। ಬೇಡಿಕೊಂಬೆ ನಿನ್ನನೂ॥2॥ ಕಾಂತನನ್ನು ದೀರ್ಘಜೀವ। ವಂತನಾಗಿ ಬಾಳುವಂಥ। ವರವ ಪಾಲಿಸಮ್ಮ। ಕುಂತಳಾಂಬಿಕೇ ಶಿವೇ॥3॥

### ಭಲಾ ಭಲಾ ಬಲಭದ್ರ ಸಹೋದರರ್ (ಭಂಡಾರ ಒಡೆದದ್ದು)

ಭಲಾ ಭಲಾ ಬಲಭದ್ರ ಸಹೋದರರ್। ಒಡದರು ಘನ ಭಂಡಾರವನು॥ಪ॥ ದೀವಿಗೆ ನೋಡಿಯೆ ಮಾಡಬೇಕೆಂದೆನುತ ದ್ವಾರಕೆಗೈತಂದರು ಬೇಗ। ದೇವಕಿ ವಸುದೇವರಿಗಭಿವಂದಿಸಿ। ಸಹೋದರರನು ಕರೆದರು ಮನೆಗೆ॥1॥ ಬಡತಂಗಿಯ ಮನೆ ಇಂದಿನ ಹಬ್ಬಕ್ಕೆ ಗರುಡವಾಹನ ವೇರಿ। ಅಗ್ರಜರು ಬರುತಿರೆ ಕಂಡರು ಕುಂತಿ ಕುಮಾರರು ಕರೆ ತಂದರು ತಮ್ಮಯ ಅರಮನೆಗೆ॥2॥ ಬಂದಿಹ ಬಲರಾಮರು ಗೋವಿಂದರು ಚಂದದಿ ಮಜ್ಜನವನೆ ಮಾಡಿ। ಚಂದವಾದ ನವರತ್ನ ಪೀತಾಂಬರ ಗಂಧ ಪುಷ್ಪಗಳಿಂದಲಂಕಾರವನೆ ಮಾಡಿ॥3॥

### ಶಕ್ತಿ ಗಣೇಶನ ಭಕ್ತಿಯಲಿ ಬಲಗೊಂಡು

ಶಕ್ತಿ ಗಣೇಶನ ಭಕ್ತಿಯಲಿ ಬಲಗೊಂಡು। ಭಕ್ತಿ ಪೂರ್ವಕವಾಗಿ ಕಥೆಯ ಕೇಳಿ॥ ಮುತ್ತೈದೆತನಗಳ ಸೆರಗೊಡ್ಡಿ ಬೇಡುವೆ। ಅರ್ಥಿಯಿಂದಲಿ ನೋವೆ (ವ್ರತ) ತೊಡಗಿದರು॥ ಜ್ಯೋತಿಗೆ ಸಕಲ ಸನ್ಮತಿಗೆ॥1॥ ಕತ್ಲರಾಯನ ಹೊಟ್ಟೆಯಲಿ ಪುತ್ರ ಹುಟ್ಟಿದನಂದು। ವಿಪ್ರ ಸುರರೆಲ್ಲಾ ನೆರೆದರಾಗ॥ ಅರ್ಥಿಯಿಂದಲಿ ಹೋಗಿ ಜಾತಕವ ಬರಿಸಿ। ಇಟ್ಟರು ಕಾಳಿಂಗನೆಂಬ ಹೆಸರು ॥2॥ ಕತ್ಲರಾಯನ ಮಗ ಕಾಳಿಂಗರಾಯನು। ಅರ್ಥಿಯಿಂದ ಬೇಟೆಗೆ ಹೋದನು॥ ಚಿತ್ರದ ಹುಲಿಕಂಡು ಮೂರ್ಛೆಗೈಯ್ಯಲು। ಮಾತಾಪಿತೃಗಳು ನೆರೆದರಾಗ ॥3॥ ಪಟ್ಟವಾಳಿಸೆರಗಿಲೆ ಹತ್ತುಸಾವಿರ ಹೊನ್ನ। ಕಟ್ಟಿದರು ಆಕ್ಷಣದೊಳಗೆ। ಸತ್ತ ಶವಕೆಹೆಣ್ಣ ಕೊಟ್ಟರೀ ಎನುತಲೆ। ಪಟ್ಟಣದೊಳಗೆಲ್ಲಾ ಸಾರಿದರು॥4॥ ಅಣ್ಣ ಅತ್ತಿಗೆ ಬಳಿಯಲಿ ಕನ್ನಿಕೆಯನು ಬಿಟ್ಟು ಪುಣ್ಯಪುರುಷರು ಕಾಶಿಗೆ ಹೋದರು॥ ಮಾನ್ಯರ ಮಗತಾ ಮೂರ್ಛೆಗೈದಿರುವನು। ಕನ್ನಿಕೆಯನು ಕೊಡು ಎಂದು ಹೇಳಿದರು ॥5॥ ಅಣ್ಣ ಅತ್ತಿಗೆ ಕೂಡಿ ಆಲೋಚನೆಯ ಮಾಡಿ ಕನ್ನಿಕೆಧಾರೆಯನೆರೆಯೋಣೇಗ ॥ಬಣ್ಣ ಬಂಗಾರವು ಹೊನ್ನಿನ ಜಾಳಿಗೆ। ಕನ್ನೆಗೆ ಸಹಿತ ನಮಗೀವದು॥6॥ ಆಗ ತಾಳಿಯ ತಂದು ಬೇಗಕಂಕಣಕಟ್ಟಿ ಶೀಘ್ರದಿಂದಲಿ ಧಾರೆಯೆರೆದರು॥ ವೇಳೆ ಮೀರಿತೆಂದು ಹೊತ್ತಾಗ ವೈದ್ಯರು। ಭಾಗೀರಥಿಯ ದಡದ ಮೇಲೆ ॥7॥ ಕಾರೆಂಬ ಕತ್ತಲೆ ಭೋರೆಂಬ ಮಳೆಬಂದು। ಅರಣ್ಯದಲ್ಲಿ ಒಯ್ದು ನಿಲ್ಲಿಸಿದರು॥ ನಾರಿಯೇ ನಿನ್ನ ಗಂಡನ ಕಾಯ್ದುಕೋ ಎಂದು ಬೇಗನೆ ನಾರಿಯರು ತಿರುಗಿದರು ॥8॥ ಅಂದ ಮಾತನು ಕೇಳಿ ನೊಂದು ತನ್ನ ಮನದೊಳು। ಇಂದಿರಾಪತಿಯೇ ಗತಿ ಎನ್ನುತ। ತಂದೆ ತಾಯಿಗಳನ್ನು ಮನದೊಳಗೆ ನೆನೆಯುತರಂಭೆ ಅತಿ ದುಃಖವ ಪಡುತ್ತಿದ್ದಳು॥ಜ್ಯೋತಿ॥9॥ ಒಂದು ಗಲ್ಲದಲಿಹಾಲು ಒಂದು ಗಲ್ಲದಲಿ ಬೆಣ್ಣೆ ಕಂದಮ್ಮ ನಿನಗೇಕೆ ಕಡು ದುಃಖವು ರಂಭೆ ನಮ್ಮ ಮಂದಿರಕೆ ಬಾಬಾ ಎನುತಲಿ। ಚಂದದಿ ಮಾವಯ್ಯ ಕರೆದನಾಗ ॥10॥ ರೊಕ್ಕಕಾಶೆಮಾಡಿ ಕೊಟ್ಟರು ನಮ್ಮವರು। ಮತ್ತೆ ನಾ ಊರಿಗೆ ಹೋಗೆನೆಂದಳು॥ ಅಟ್ಟುಂಬ ಅಡವಿಯಲಿ ಚಿತ್ತದೊಲ್ಲಭನ ಹತ್ತಿರದಲೇ ಇದ್ದು ನಾಕಾಯ್ದು ಕೊಂಬೆ॥11॥ ಅಂದಮಾತನು ಕೇಳಿ ಅತಿಕ್ಲೇಶ ಪಡುತಲಿ। ಬಂದು ಭೂಪನು ತನ್ನ ಅರಮನೆಗೆ। ಅಂದುದಯವಾಗಲು ರಂಭೆಯರ ಮಕ್ಕಳು ಚಂದದಿ ಪುಷ್ಪಗಳ ತರ ನಡೆದರು ॥12॥ ರಾಯರ ಮಡದೀ ಭೂದೇವನ ಕಿರಿತಂಗಿ। ನೀರದಡದಲ್ಲಿ ಕುಳಿತಿದ್ದಳು। ಬಾಹೋ ಬಾಲೆಯರೊಳಗಿನ ಸುದ್ದಿ। ಏನು ಇದೆಂದು ಕೇಳಿದಳು ।13॥ ಆಷಾಡ ಮಾಸದಲಿ ಈ ವ್ರತವ ಮಾಡಲು। ಶ್ರೀಶನೊಲುಮೆಯು ನಮಗಾಗುವನು। ಪೋಷಿಸಿ ಪತಿಯ ಚಿರಾಯು ಮಾಡುವೆನೆಂದು। ತೋಷದಿ ಬಾಲೆಯರು ಹೇಳಿದರು ।14॥ ಊರೊಳಗೆಲ್ಲಾ ಠಾಣಾದೀವೆಗೆ

ನೋವಿ (ವ್ರತ) ನೂಲಬೇಕೆಂದು ಸಂಭ್ರಮದಿ।। ಗೋಗಳ ಕಾಯ್ಕೊಂಡು ಹೂಗಳ ಕೊಯ್ಕೊಂಡು। ಭೋರೆಂದು ನಾರಿಯರು ತೆರಳಿದರು ।।15।। ಅಂದ ಮಾತನು ಕೇಳಿ ಅತಿಹರುಷವ ತಾಳಿ ಬಂದಳು ಭಾಗೀರಥಿನದಿಯೊಳಗೆ। ಮಿಂದು ಮಡಿಯನುಟ್ಟು ಸಂದೇಹವಿಲ್ಲದೆ। ಚಂದದಿ ನಡೆದಳು ಶವವಿದ್ದ ಸ್ಥಳಕೆ ।।16।। ಸಿದಿಗೆಯನು ಮುರಿದು ಠಾಣಾದೀವಿಗೆಯನುಮಾಡಿ। ಶೀಘ್ರದಿ ಮಳಲಿ ಮುಟ್ಟಿಗೆಯನು ಮಾಡಿ। ನಾರು ಬತ್ತಿಯ ಮಾಡಿನೀರು ಎಣ್ಣೆಯ ಮಾಡಿ। ನಾನೆಲ್ಲಿ ಗೌರಿಯ ನೂತಳಾಗ (ಪೂಜಿಸಿದಳಾಗ) ।17।। ಊರೊಳಗೆಲ್ಲ ಠಾಣಾದೀವಿಗೆ ನೋಡಿ। ಅಣ್ಣಯ್ಯ ಭಂಡಾರವನೊಡೆದು ಕೊಟ್ಟ।। ನನ್ನ ಭಂಡಾರವನಿಂದು ಒಡೆಯುವರಾರೆಂದು। ತುಂಬಿತು ನಾರಿಯ ಅರಳೆಗಣ್ಣು ।।18।। ನಂದಿಯನೇರಿ ಕೊಂಡು ಕೆಂಜೆಡೆಧರಿಸಿದ। ಚಂದ್ರಶೇಖರ ಪಾರ್ವತಿ ಬಂದರು।। ತಂಗಿಯಿದೇನೆಂದು ಚಂದದಿ ಹೇಳೆನಲು। ಇಂದಿನ ವ್ರತವೆಂದು ಅರುಹಿದಳು।।19।। ಪಾರ್ವತಿ ವ್ರತವನು ಹೇಳಲು ಮಹಾದೇವ ಭಂಡಾರವನು ಒಡೆದು ಕೊಟ್ಟ।। ತಂದು ಕಮಂಡಲದುದಕ ಸಿಡಿಲು। ಭೂಮಂಡಲ ಪತಿ ಮೈಮುರಿದೆದ್ದನು ।।20।। ಕಣ್ಣು ತೆಗೆದುನೋಡಿ ಕನ್ಯೆ ನೀ ನಾರು। ಹೆಣ್ಣೆ ನೀ ನಾರ ಮಗಳೆಂದರು।। ಹೊನ್ನಿಗಾಶೆಮಾಡಿ ಕೊಟ್ಟವರು ನಮ್ಮವರು। ನಿಮ್ಮವರು ಧಾರೆಯನು ಎರೆದರು ।।21।। ಕನ್ಯೆಯ ನುಡಿ ಕೇಳಿ ಘನಹರುಷದಿಂದ। ನಿನ್ನ ಪುಣ್ಯದಿ ನಾ ಉಳಿದೆನೆಂದನು। ಮಾನ್ಯರೆ ವಚನಕೇಳಿ ನಿಮ್ಮ ಹಿರಿಯರ ಪುಣ್ಯ। ಇನ್ನು ಈ ಕಾಲವೊದಗಿ ತೆಂದಳು ।।22।। ನಾರಿಪುರುಷರು ಆನಂದದಿಂದಿರುತಿರಲು। ಗೋವು ಕಾಯುವ ಮಕ್ಕಳು ಕಂಡರು। ಬೇಗನೆ ಬಂದು ರಾಯ ನಿನ್ನಯ ಮಗಸೊಸೆ। ನೀರದಡದಲೆ ಆನಂದದಿಂದಿರುತಿರಲು ।।23।। ಅಂದಮಾತ ಕೇಳುತ ಭೂಪತಿ ತಾನು। ಪ್ರೇಮಾಶ್ರುಗಳ ಚೆಲ್ಲಿ ಹೀಗೆಂದನು। ಸ್ವಾಮಿ ಶ್ರೀಹರಿಯ ದಯನನಗಾಯಿತೆನುತಲಿ। ಮತ್ತೆ ಬ್ರಾಹ್ಮಣರ ಸಹಿತ ತಾ ಬಂದನು ।।24।। ಪುತ್ರ ಸೊಸೆಯನೋಡಿ ಅತ್ಯಂತ ಹರುಷದಿ ಚಿತ್ತದೊಳಗೆ ನಲಿಯುತ್ತದನು। ಮತ್ತೆ ನಮ್ಮ ಹಿರಿಯರ ದಯವು ಇದೆಯೆನುತಲಿ। ಲಕ್ಷಗೋದಾನಗಳನ್ನು ಕೊಟ್ಟನು ।।25।। ಅತ್ತೆ ಮಾವ ಸುತ್ತ ಬಳಗಗಳು ಬಂದು। ಹತ್ತಿರ ಇದ್ದ ಗೆಳತಿಯರೆಲ್ಲ ಬಂದು। ಇಂದು ಸತ್ತಾತನು ಹ್ಯಾಂಗೆ ಬದುಕಿದನೆಂದು। ಸಂಭ್ರಮಾಶ್ಚರ್ಯದಿ ಕೇಳಿದರು ।।26।। ತಂದೆ ತಾಯಿ ಬಂಧು ಬಳಗವು ಬಂದು। ರಂಭೆ ಗೆಳತಿಯರೆಲ್ಲ ಬಂದು। ಇಂದು ಸತ್ತಾತನು ಹ್ಯಾಂಗೆ ಬದುಕಿದನೆಂದು। ಸಂಭ್ರಮಾ ಶ್ಚರ್ಯದಿ ಕೇಳಿದರು।।27।। ಏನು ನೋವಿಯನೂತಿ (ಯಾವವ್ರತವ ಮಾಡಿದೆ) ಏನು ಬಾಗಿನಕೊಟ್ಟೆ। ಮಾವಯ್ಯ ಸೊಸೆಯನು ಕೇಳಿದ।। ಆಷಾಢಮಾಸದಲಿ ಅಮಾವಾಸ್ಯೆ ದಿನದಲಿ। ದಿವಶಿಗೌರಿಯ ನೂತೆ ನಾನು ।।28।। ಕಂದ ಸೊಸೆಯನು ಅಂದಣವ ನೇರಿಸೆ। ಬಂದರು ಬಹಳ ಸಂಭ್ರಮದಲಿ। ತಂದೆ ತಾಯಿಗಳು ಹಿಂದಿನ ವಾರ್ತೆಯ ಕೇಳಿ ಆನಂದದಿ ನಗೆ ಹರಿಸಿದರು ।।29।। ಅಷ್ಟು ಜನರ ಸಹಿತ ಪಟ್ಟಣವನು ಪೊಕ್ಕು ಶ್ರೇಷ್ಠ ಸಿಂಹಾಸನವನೇರಿದನು।। ಪಟ್ಟಗಟ್ಟಲು ರಾಜ ಅಷ್ಟು ಜನರಿಗೆ ಉಡುಗೊರೆ ಕೊಟ್ಟು ಸಂತೋಷದಿ ಆರತಿಯ ಬೆಳಗಿದರು ।।30।। ಅಣ್ಣ ಅತ್ತಿಗೆಯರುಖಿನ್ನ ಮನದಿ ಪೋಗೆ। ಮನ್ನಿಸೆ ಅವರಿಗಾವರಿಸುತಲಿ। ಎನ್ನು ದೈವಕೆ ನೀವಿನ್ನೇನು ಮಾಡುವಿರಿ। ಅನ್ನುತ ಅವರ ತೋಷಿಸುತ್ತಿದ್ದಳು ।।31।। ಪತಿವ್ರತಾಸ್ತ್ರೀಯರಿಗತಿ ಕ್ರೋಧವಿಲ್ಲೆಂದು ಪೃಥ್ವಿಯೊಳಗಿನ ಜನರು ಹಿತದಿ ರಾಜ್ಯವನಾಳಿ। ಪೊಗಳಿದರು। ಸತಿಪತಿಯರು ಕೂಡಿ ಹಿತದಿ ರಾಜ್ಯವನಾಳಿ ಕ್ಷಿತಿ ಸುರರರ್ಚಿಸಿ ಗತಿ ಪಡೆದರು ।।32।। ಅಡವಿ ಅರಣ್ಯಕ್ಕಾಗಿ ಕಡೆಯಿಲ್ಲವೆ ರಥವಾಗಿ। ಮೃಡಪಾರ್ವತಿ ಬಂದು ವರಕೊಟ್ಟಳು।। ದೃಢಮನದಲಿ ಪಾರ್ವತಿಯು ನೂತನೋವಿಯ (ಮಾಡಿದ ವ್ರತ) ಪೊಡವಿಯೊಳಗೆಲ್ಲ ಆಗಲಿ ನೋವಿ (ವ್ರತ) ।।33।।

## ಶಶಿವದನೆಯರೇ ದಿವಶೀ ವ್ರತವ ಮಾಡಿರೇ (ಸಂಕ್ಷಿಪ್ತ ದಿವಶೀಗೌರಿಕಥೆ)

ಶಶಿವದನೆಯರೇ ದಿವಶೀ ವ್ರತವ ಮಾಡಿರೇ। ಶಶಿಶೇಖರನ ರಮಣಿಯ ಪೂಜಿಸಿ ವರವ ಬೇಡಿರೇ।।ಪ।। ಕತ್ಲರಾಯನ ಪುತ್ರಿ ದಿವಶಿ ಪುತ್ರನ ಪಡೆದು। ಇತ್ತ ವಸ್ತ್ರಗಳರ್ಥಿಯಿಂದಲಿ ಚದುರೆಗೆ ತಾವು।।1।। ಮೃತನಾದ ಸುತಗೆ ಸತಿ ಕೊಡುವೆ ಎಂದು ಜಪಿಸಲು। ಸತತದ್ರವ್ಯ ಕೊಡುವೆಯೆಂದು ಮಾತನಾಡಿಸಿದವನ।।2।। ಬಂಗಾರಬೆಳ್ಳಿದ್ರವ್ಯ ಸಹನಮಗೆ

ಬರುವದು। ಹಾಗೆಂದು ಮಾಂಗಲ್ಯ ಬಂಧನಮಾಡಿ ಪೋದರು।।3।। ಪತಿಯ ಬಿಟ್ಟು ಪೋದರೆ ಪತಿವ್ರತವು ಬಾರದು। ಹಿತವ ಬಯಸಿ ಪೋದಮೇಲೆ ಸದ್ಗತಿಯು ಬರುವ।।4।। ನಾರುಬತ್ತಿಯ ನೀರು ಎಣ್ಣೆಯ ಗೌರೀಗೆಮಾಡಿದಳು। ಅಪಾರಶಾಲಿ ತಾನು ಗೌರಿಪೂಜೆಮಾಡಿದಳು।।5।। ಒಂದು ದಿವಸ ಸುಂದರಿ ಬಂದು ಕೇಳಿದಳು। ಮಂದಿ ಬಳಗ ಇಲ್ಲದೆ ಪೂಜೆಯಮಾಡಿದಳು।।6।। ಹರನು ತಾಭಂಡಾರ ಒಡೆದು ಹರುಷ ಗೆಲಿದನು। ವರಕಾಳಿಂಗ ನಾಕ್ಷಣದಲೆದ್ದು ಕುಳಿತನು।।7।। ಪೊಡವಿಯೊಳಗಿನ ಮಡದಿಯರೆಲ್ಲರಿಗೂ ಇದು ಸುವ್ರತವು। ಬಿಡದೆ ಮಾಳ್ಪರಿಗೆ ಕಡು ಮುತ್ತೈದೆತನ ಕಡೆವರೆಗೆ।।8।। ಆಷಾಢಮಾಸ ಅಮಾವಾಸ್ಯ ದಿನದಲಿ। ಸೂಸಿಲಿಂದ ಮಾಳ್ಪರಿಗೆ ಶ್ರೀವೇಂಕಟೇಶ ಒಲಿವ।।9।।

**ಪೂಜಿಸುವೆನು ಗಿರಿಜೆ ಶಾರದೆಯಾ** **ರಾಗ: ಬೇಹಾಗ್**

ಪೂಜಿಸುವೆನು ಗಿರಿಜೆ ಶಾರದೆಯಾ। ಪಾರ್ವತಿಯಾ ಪರಮ ಪಾವನೆಯಾ।।ಪ।। ಸ್ನಾನವ ಮಾಡುತ ಶುದ್ಧ ಮಡಿಯನ್ನುಟ್ಟು ಇಡುತ ಫಣೆಯೊಳು ಭಸಿತವನು। ಮಾಡುವೆನು ಗೌರೀ ಪೂಜೆಯನು।।1।। ಗಂಧಾಕ್ಷತೆ ಪುಷ್ಪ ಬಿಲ್ವ ಪತ್ರೆಯ ಧರಿಸಿ। ಅರಿಸಿನ ಕುಂಕುಮ ಹಚ್ಚುವೆನು। ಮಾಡುವೆನು ಗೌರಿ ಪೂಜೆಯನು।।2।। ಹಣ್ಣು ತೆಂಗಿನ ಕಾಯಿ ಒಡೆದು ಕ್ಷಮಿಸು ಎನುತ। ಹಚ್ಚುವೆ ಕರ್ಪೂರ ದೀಪವನು। ಮಾಡುವೆನು ಗೌರಿ ಪೂಜೆಯನು।।3।। ಇಟ್ಟು ಗಾಜಿನ ಬಳೆ ಕಟ್ಟಿದ ಕರಿಮಣಿ। ಬೊಟ್ಟು ಕುಂಕುಮ ಬೆಸೆಕೊಡು ಎಂದು। ಬೇಡುವೆನು ಸೆರಗೊಡ್ಡುವೆನು। ಮಾಡುವೆನು ಗೌರಿ ಪೂಜೆಯನು।।4।।

**ಪರ್ವತ ರಾಜಕುಮಾರಿ** **ರಾಗ: ಶ್ರೀರಂಜನಿ-ಆದಿತಾಳ**

ಪರ್ವತ ರಾಜಕುಮಾರಿ ಪಾರ್ವತಿ ಪಾಹಿಮಾಂ ಪರಮೇಶ್ವರಿ।।ಪ।। ಸರ್ವಾನಂದಮಯಿ ಚಕ್ರವಾಸಿನಿ ಸದ್ಗುರುಗುಹ ಜನನಿ ಶ್ರೀರಂಜನಿ ಶರ್ವಾಣಿ ಶಂಭು ಮೋಹಿನಿ ಶರಚ್ಚಂದ್ರಿಕಾ ಧವಳ ಪ್ರಕಾಶಿನಿ।।ಅ.ಪ।। ಕೈಲಾಸಪುರ ವಿಲಸಿತ ಪ್ರಸಿದ್ಧ ಕಾಮೇಶ್ವರಿ ಕಂಜಲೋಚನಿ ಕವಿಹೃದಯಾವೇಶಿನಿ ಪಾಶಮೋಚನಿ ಪಾಕಶಾಸನಾದಿ ದೇವಪಾಲಿನಿ ಕೌಲಿನಿ ತ್ರಿಪುರಾದಿ ಮರ್ದಿನಿ ಕಂದರ್ಪಜನಕಾಪಾಂಗವೀಕ್ಷಿಣಿ ಕೈವಲ್ಯಪ್ರದಾಯಿನಿ ಕಾವ್ಯಾಲಾಪ ವಿನೋದಿನಿ ಮಂದಹಾಸಿನಿ।।ಚರಣ।।

**ಶಿವೇ ಪಾಹಿಮಾಂ ಅಂಬಿಕೇ** **ರಾಗ: ಕಲ್ಯಾಣಿ-ಆದಿತಾಳ**

ಶಿವೇ ಪಾಹಿಮಾಂ ಅಂಬಿಕೇ। ಶ್ರಿತಫಲದಾಯಕಿ।।ಪ।। ಕವೇರಜೋತ್ತರ ತೀರವಾಸಿನಿ। ಕಾತ್ಯಾಯಿನಿ। ಧರ್ಮಸಂವರ್ಧಿನಿ।।ಅ.ಪ.।। ಸ್ವಭಾವತಾ ನೀ ಪ್ರಭಾವಮು ಮಹಾ। ನುಭಾವುರಾಲೈನ ಭಾರತಿಕಿ ಪೊಗ। ಡ ಭಾರಮೈಯುಂಡ ಭಾವಜಾರಾ। ತಿ ಭಾಮನೇನೆಂತ ಭಾಗ್ಯದಾಯಿನಿ।।1।। ಕಲ್ಯಾರ್ಧಮವು ಶಶಿಕಲಾಧರೀ ಉಪ। ವಲಾರಿ ಮಾಯಾ ವಿಲಾಸಿನೀ ಸ। ಕಲಾಗಮನುತೇ ಭಲಾರಿಯನ ಶುಭ। ಫಲಾಲೊಸಗು ಪರಮ ಲಾಲ ಸಮ್ಮು ನ।।2।। ಚರಾಚರಮಯೀ ಕರಾರವಿಂದಮು। ನರಾಮ ಚಿಲುಕನು ಬಿರಾನ ಬೂನಿ। ಪರಾಕುಲಾ ಜೂಡರಾದು ಶ್ರೀರಘು। ವರಾಪ್ತುಡಗು ತ್ಯಾಗರಾಜ ವಿನುತೇ।।3।।

**ಹಿಮಾದ್ರಿಸುತೇ ಪಾಹಿಮಾಂ** **ರಾಗ: ಕಲ್ಯಾಣಿ-ರೂಪಕತಾಳ**

ಹಿಮಾದ್ರಿಸುತೇ ಪಾಹಿಮಾಂ ವರದೇ ಪರದೇವತೆ।।ಪ।। ಸುಮೇರು ಮಧ್ಯವಾಸಿನಿ ಶ್ರೀ ಕಾಮಾಕ್ಷಿ।।ಅ.ಪ।। ಶ್ಯಾಮಕೃಷ್ಣ ಸೋದರಿ ಗೌರಿ ಪರಮೇಶ್ವರಿ ಗಿರಿಜಾ ನೀಲವೇಣಿ ಕೀರವಾಣಿ ಶ್ರೀ ಲಲಿತೇ।।ಚರಣ।।

**ಹಿಮಗಿರಿ ತನಯೇ** **ರಾಗ: ಶುದ್ಧಧನ್ಯಾಸಿ-ಆದಿತಾಳ**

ಹಿಮಗಿರಿ ತನಯೇ ಹೇಮಲತೇ ಅಂಬಾ ಈಶ್ವರಿ ಶ್ರೀ ಲಲಿತೇ ಮಾಮವ।।ಪ।। ರಮಾವಾಣಿ ಸಂಸೇವಿತ ಸಕಲೆ ರಾಜರಾಜೇಶ್ವರಿ ರಾಮಸಹೋದರಿ।।ಅ.ಪ।। ಪಾಶಾಂಕುಶೇಕ್ಷು ದಂಡಕರೇ ಪರಾತ್ಪರೆ ನಿಜಭಕ್ತ ಪರೆ। ಆಶಾಂಭರ ಹರಿಕೇಶ ವಿಲಾಸೆ ಆನಂದ ರೂಪೆ ಅಮಿತ ಪ್ರತಾಪೆ।।ಚರಣ।। ಚಿಟ್ಟಿಸ್ವರ

॥ ಸಾಸನಿ ಸನಿಪಾ ಪಾಪಮ ಪಮಗಾ । ಗಮಗಮ ಪನಿಪಮ। ಗಮಪನಿ ಸಾ॰ ॥ ಸಗಗಸ ನಿಸಸನಿ ಪನಿನಿಪ ಮಪಪಮ । ಮಗಪಮ ನಿಪಸನಿ । ಪಸನಿನಿ ಸಾ॰ ॥ ನಿಸಾಗ ಪನೀಸ ಮಪಾನಿ ಸಗಾಮ । ಪನಿಪಸಾನಿಪಾ । ಸಪನಿಸ ಗಾ॰ ॥ ಮಮಗಗ ಸಸನಿನಿ ಪಪನಿನಿ ಮಮಪಪ। ಗಮಪ ಸಗಮಪನಿ । ಸನಿಪಗಾಮಪನಿ ॥

**ಹಿಮಗಿರಿ ಕುಮಾರಿ** **ರಾಗ: ರವಿಕ್ರಿಯೆ-ಆದಿತಾಳ**

ಹಿಮಗಿರಿ ಕುಮಾರಿ ಈಶ್ವರಿ ಹೇಮಾಂಬರಿ ಹರ ಸೋದರಿ ಸುಂದರಿ॥ಪ॥ ಕಮಲ ಭವಾದಿ ವಿನುತ ಬೃಹದೀಶ್ವರಿ ಕಮನೀಯತರ ಗುರುಗುಹ ವಿಭಾಸ್ವರಿ ವಿಮಲ ಹೃದಯ ಕಮಲ ವಿಕಾಸಕರಿ ವಿಧುವಹ್ನಿ ರವಿಕ್ರಿಯಾಶಕ್ತಿಕರಿ॥ಚ॥

**ಪಾಹಿಮಾಂ ಪಾರ್ವತಿ** **ರಾಗ: ಮೋಹನ-ರೂಪಕತಾಳ**

ಪಾಹಿಮಾಂ ಪಾರ್ವತಿ ಪರಮೇಶ್ವರಿ ಶ್ರೀ॥ಪ॥ ಮೋಹನ ಸುಂದರ ಸ್ವರೂಪಿಣಿ ಮೋದಕ ಕರ ಗುರುಗುಹ ಭಕ್ತ ಜನಾವನ ಶಂಕರಿ॥ಅ.ಪ॥ ಪಂಚಾನನ ಹೃದಯೇಶ್ವರಿ ಪರಮೇಶ್ವರ ಮೋಹಿನಿ ಸರ್ವೇಶ್ವರಿ ಸರ್ವಾನಂದಮಯಿ ಚಕ್ರವಾಸಿನಿ ವಾಂಛಿತಾರ್ಥ ಫಲಪ್ರದಾಯಿನಿ ವಾರಿಜಾಸನಾದಿನುತ ಚರಣನಳಿನಿ ಸಂಪ್ರದಾಯ ಕುಲೋತ್ತೀರ್ಣ ಯೋಗಿನಿ॥ಚ॥

## ಧರೆಯೊಳಗೆ ಉತ್ತಮ ಮನುಜ ವೈದೀಕ (ವ್ರತಕಥೆ)

ಧರೆಯೊಳಗೆ ಉತ್ತಮ ಮನುಜ ವೈದೀಕ ಬ್ರಾಹ್ಮಣಗೆ। ಇರುವರೇಳು ಮಂದಿ ಕನ್ನಿಕೆಯರು। ಎಲ್ಲಕ್ಕೆ ಕಿರಿಯವಳ ಧಾರೆಯನೆರೆದರೇ। ಅಳಿದ ಕುಮಾರಗೆ ಹಣದಾಸೆಗೆ॥1॥ ಆ ಮಾತಾಪಿತೃಗಳು ಅತಿ ದುಃಖದಿಂ ಕೇಳಿ। ಅರಣ್ಯದೊಳಗೆ ಅವರಿಬ್ಬರನಿರಿಸಿ। ಘೋರೆಂದು ಕಾರ್ಮಳೆಯು ಇದಿರಾಗಿ ಸುರಿಯುತಿರೆ ಅರಸು ತೆರಳಿದನೇ ತನ್ನಾಲಯಕೆ॥2॥ ಆ ಸಮಯದೊಳಗೊಬ್ಬ ಗೋವ್ಗಳನೆ ಹೊಡೆತರಲು। ಗೋವ್ಗಳು ಬರುವುದಾ ತರುಣಿಕಂಡು। ಏನು ಕಾರಣವೆಂದು ಗೋವ್ಗಳನೆ ಕೇಳಲು। ಭೀಮನಮಾವಾಸ್ಯೆ ನೋಹಿಯು ಲೋಕದೊಳಗೆ॥3॥ ಇಂದಿಗೊರುಷದಿ ನನ್ನ ತಂದೆತಾಯಿ ಮನೆಯಲ್ಲಿ ಮಾಡಿದ್ದೆನು ನಾನು ಈ ವ್ರತವನು। ಈಗ ಗೋವ್ಗಳು ಬಂದು ನೆನೆಪು ಮಾಡಿದುವೆಂದು। ಮಾನುನೀ ಮನದ ಹರುಷದಲಿದ್ದಳು॥4॥ ಆ ಯಮುನೆತಡಿಗ್ಹೋಗಿ ಬೇಗ ಸ್ನಾನವಮಾಡಿ ದೇವಾಂಗ ಪಟ್ಟೆ ವಸ್ತ್ರವನೆ ಉಟ್ಟು। ಕಾದಮರಳನು ತೆಗೆದು ಕಾಲ ದೀವಿಗೆ ಮಾಡಿ। ನಾರು ಬತ್ತಿ ನೀರು ಎಣ್ಣೆಯ ನೆರೆದಳು॥5॥ ದಂಡೆ ಮರಳನೆ ತೆಗೆದು ಭಂಡಾರವ ಮಾಡಿ। ಗಂಧಾಕ್ಷತೆ ಪುಷ್ಪ ಧೂಪದೀಪದಿಂದ। ಚಂದದಿಂದ ಗೋವ್ಗಳನು ಎದುರ್ಗೊಂಡು ಪೂಜೆಯಮಾಡಿ। ಅಂಗನೆ ಮನದ ಹರುಷದಲ್ಲಿದ್ದಳು॥6॥ ಇಂದಿಗೊರುಷದಿ ನನ್ನ ತಂದೆ ತಾಯಿಮನೆಯಲ್ಲಿ। ಭಂಡಾರವಾ ತಮ್ಮ ಒಡೆದಿದ್ದನು। ಇಂದು ಭಂಡಾರವನು ಒಡೆಯುವೋರ್ಯಾರೆಂದು ಅಂಗನೇ ತುಂಬಿದಳೆ ಅರಳುಗಣ್ಣ॥7॥ ಆ ಸಮಯದೊಳಗೆ ಪಾರ್ವತಿಪರಮೇಶ್ವರರು। ತಾವಾಗಿ ಬಂದು ಬಾಗಿಲಲ್ಲಿ ನಿಂದು। ಮಾಣಿಕ್ಯದ ಕೊಡಲಿಯನು ಪಿಡಿದು ಭಾಗವಮಾಡಿ। ತಾವಾಗಿ ಹಂಚಿದರೆ ಅರ್ಥಿಯಿಂದ॥8॥ ಕರದಿ ಅಕ್ಷತೆಗೊಂಡು ಗಿಂಡಿಲುದಕವಪಿಡಿದು। ಗಂಡನ ಮೇಲೆ ತಳಿದಳಾಕೆ। ಇಂದು ಎಷ್ಟೊತ್ತು ಮೈಮರೆತು ಮಲಗಿದ್ದೆ ಎನುತಲಿ ಕಾರುಣ್ಯಸಾಗರ ಎದ್ದು ಕುಳಿತ॥9॥ ಎದುರಲಿ ನಿಂತ ಮಗನ ತೊಡೆಯಲೇರಿಸಿಕೊಂಡು। ಮಗ ನಿನ್ನ ಪ್ರಾಣವನು ಪಡೆದರ್‍ಯಾರೊ। ಮರಳಿನಾನರಿಯೆ ಸೊಸೆಯನು ಕೇಳು ಎನುತಲಿ ಜನನಿಯ ಶ್ರೀಪಾದಕೆರಗಿದಾನು॥10॥ ಬಾರಮ್ಮ ಸೊಸೆಯೆಂದು ಭಾವಿಸಿ ತೊಡೆಲಿಟ್ಟು ಪ್ರಾಣದೊಲ್ಲಭನ ನೀ ಹೇಗೆ ಪಡೆದೆ॥ ಪಾರ್ವತೀ ದೇವಿಯು ಮಾಡಿದಾ ಮಣ್ಣಿನ ಕಾಲ ದೀವಿಗೆಯಾ ವ್ರತದಿಂದಲೇ ॥11॥ ಜಯಮಂಗಳಂ ನಿತ್ಯ ಶುಭಮಂಗಳಂ॥

**ಆರುತಿ ಬೆಳಗಿರೆ ಪಾರ್ವತಿಗೆ** **ರಾಗ್: ಬೇಹಾಗ್-ಆದಿತಾಳ**

ಆರುತಿ ಬೆಳಗಿರೆ ಪಾರ್ವತಿಗೆ ಮಾರಜನಕನ ಸಹೋದರಿಗೆ।।ಪ।। ಗಿರಿರಾಜ ಕುವರಿಗೆ ಶೌರಿ ಸಹೋದರಿಗೆ। ಶಂಕರನರಸಿಗೆ ಪಾರ್ವತಿಗೆ। ವೇಂಕಟ ರಮಣನ ಬಿಂಕದಿ ಸಲಹೆಂದು। ಬೇಡುತಲಿ ಕೊಂಡಾಡುತಲಿ।।1।। ಮುತ್ತು ಮಾಣಿಕ್ಯದ ನವರತ್ನದ ಆರತಿ। ಎತ್ತಿ ಬೆಳಗಿರೆ ಬಹು ಅರ್ತಿಯಲಿ। ಮುತ್ತೈದೆತನವಿತ್ತು ಮುಕ್ತಿ ಪಾಲಿಸೆಂದು। ಬೇಡುತಲಿ, ಕೊಂಡಾಡುತಲಿ।।2।। ಪತಿಭಿಕ್ಷವನ್ನಿತ್ತು ಪಾಲಿಸು ಎನುತಲಿ। ಪರಮ ಮಂಗಳೆಯನು ಬೇಡುತಲಿ। ಪರಿಪರಿ ವಿಧದಲಿ ಪಾಲಿಸು ಎನುತಲಿ। ವರಗೌರಿಯ ವರ ಬೇಡುತಲಿ।।3।।

**ಆರತಿ ಬೆಳಗಿರೆ ಪಾರ್ವತಿಗೆ ಗಿರಿಜ ಕಲ್ಯಾಣಿಗೆ**

ಆರತಿ ಬೆಳಗಿರೆ ಪಾರ್ವತಿಗೆ ಗಿರಿಜ ಕಲ್ಯಾಣಿಗೆ ಗೀರ್ವಾಣಿಗೆ ಆರುತಿ ಬೆಳಗಿರೆ ಪಾರ್ವತಿಗೆ।।ಪ।। ಮುತ್ತಿನ ಆರುತಿ ರತ್ನದ ಆರುತಿ ಮುತ್ತೈದಿತನಕೆ ಸ್ಥಿರವೆನ್ನಿರೆ ಮುತ್ತೈದಿತನವು ಸ್ಥಿರವಿರಲೆಂದು ಮುತ್ತೈದೆರೆಲ್ಲಾಪಿಡಿದೆತ್ತಿರೆ।।1।। ಹವಳದ ಆರುತಿ ಪವಳದ ಆರುತಿ ಹರದಿಯರೆಲ್ಲ ಪಿಡಿದೆತ್ತಿರೆ ಹರದಿಯರೆಲ್ಲಾಪಿಡಿದೆತ್ತಿದಾರುತಿ ಸಾವಿತ್ರಿತನವು ಸ್ಥಿರವಿರಲೆಂದು।।2।। ಚಿನ್ನದ ಆರುತಿ ರನ್ನದ ಆರುತಿ ರಂಭೆರೆಲ್ಲ ಪಿಡಿದೆತ್ತಿರೆ ರಂಭೆಯರೆಲ್ಲ ಪಿಡಿದೆತ್ತಿದಾರುತಿ ಮಂಗಳಸೂತ್ರವು ಸ್ಥಿರವಿರಲೆಂದು।।3।।

**ವರವ ಕೊಡು ತಾಯಿ** **ರಾಗ: ಮಧ್ಯಮಾವತಿ-ಆದಿತಾಳ**

ವರವ ಕೊಡು ತಾಯಿ ವರವ ಕೊಡು(4ಸಾರಿ)।।ಪ।। ಅರಿಶಿನ ಕುಂಕುಮ ಅರಳು ಮಲ್ಲಿಗೆ ಜಾಜಿ। ಸ್ಥಿರವಾಗಿ ಇರುವಂತೆ ವರವಕೊಡು।।1।। ಕಟ್ಟಿದ ಮಾಂಗಲ್ಯ ಕರಿಮಣಿ ಗಾಜಿನ ಬಳೆ। ಸ್ಥಿರವಾಗಿ ಇರುವಂತೆ ವರವಕೊಡು।।2।। ಗೋದಾನ ಭೂದಾನ ಅನ್ನದಾನ ಕನ್ಯಾದಾನ। ಸ್ಥಿರವಾಗಿ ನೀಡುವಂತೆ ವರವ ಕೊಡು।।3।। ಉಪ್ಪರಿಗೆ ಮನೆಯಲ್ಲಿ ಚಿನ್ನದ ತೊಟ್ಟಿಲ ಕಟ್ಟಿ। ಜೋಗುಳ ಪಾಡುವಂತೆ ವರವ ಕೊಡು।।4।।

**ಮೊರೆಯ ಕೇಳು ತಾಯೆ** **ರಾಗ: ಶುದ್ಧಧನ್ಯಾಸಿ**

ಮೊರೆಯ ಕೇಳು ತಾಯೆ ಮರುಕ ತೋರುತಾಯೆ। ಮಹಾಮಾಯೆ ಮಹಾಗೌರಿ ಮಹಾದೇವಿಯೆ।।ಪ।। ಅಂಬೆ ನಿನ್ನ ನಾಮವೆಂಬ ದಿವ್ಯ ಘೋಷಣೆ। ತುಂಬಿಬಂದು ಕಳೆಯಲೆನ್ನ ಸಕಲ ವೇದನೆ। ನಂಬಿ ನಿನ್ನ ಪಾದವನ್ನು ಶರಣು ಬಂದೆನೆ। ಶಾಂಭವಿ ಶಂಕರಿ ದಯವು ಬಾರದೇನೆ।।1।। ಅಳಲಿ ನಿನ್ನ ಬೇಡುವೇನು ಹಣೆಯ ತಿಲಕವ। ಅಳಿಸದಂತೆ ಪಾಲಿಸೈ ಮುತ್ತೈದೆ ಭಾಗ್ಯವ। ಬಾಳನೌಕೆ ಗಾಳಿಯಲ್ಲಿ ಸಿಲುಕಿ ನಿಂತಿದೆ। ಅಳಿಸದಂತೆ ಉಳಿಸುತಾಯೆ ಮಹಾಮಾಯೆ ಮಹಾಗೌರಿ ಮಹಾದೇವಿಯೆ।।2।। ಲೋಕಮಾತೆ ಪೂಜಿಪೆ ಜಗದ ಜನನಿಯೆ। ಶಾರದಾಂಬೆ ನಮಿಸುವೆ ಸರ್ವಮಂಗಳೆ। ಭಕ್ತಿಯಿಂದ ಪ್ರಾರ್ಥಿಸುವೆನು ಮಹಾದೇವಿಯೆ। ಪಾರ್ವತಿ ಪರಮೇಶ್ವರಿ ಕಾತ್ಯಾಯಿನಿ।।3।।

**ಪರಮೇಶ್ವರಿಯೇ ಪಾರ್ವತಿ ದೇವಿ (ಮಂಗಳ)**

ಪರಮೇಶ್ವರಿಯೇ ಪಾರ್ವತಿ ದೇವಿ। ಕಾಮಿತದಾಯಿನಿ ಮಂಗಳಂ। ಶ್ರೀಶಿವಶಕ್ತಿ ಸರ್ವೇಶ್ವರಿಯೆ। ಕಾತ್ಯಾಯನಿಯೆ। ಮಂಗಳಂ।। ಮಂಗಳಂ। ದೇವಿ ಮಂಗಳಂ।।1।। ಆದಿ ಪರಾಶಕ್ತಿ। ಅಂಬಾಭವಾನಿ। ಅಖಿಲಾಂಡೇಶ್ವರಿ ಮಂಗಳಂ। ಆದಿಶಕ್ತಿ। ಬ್ರಹ್ಮಾಂಡರೂಪಿಣಿ। ಅನಾದಿತಾಯೆ। ಮಂಗಳಂ। ಮಂಗಳಂ ದೇವಿ। ಮಂಗಳಂ।।2।। ಕೌಮಾರಿದೇವಿ। ಕುಮಾರಿ ಜನನೀ। ವಿಷ್ಣುಸಹೋದರಿ। ಮಂಗಳಂ। ಅನ್ನಪೂರ್ಣೇಶ್ವರಿ। ಶ್ರೀ ವಿಶ್ವೇಶ್ವರಿ। ರಾಜರಾಜೇಶ್ವರಿ। ಮಂಗಳಂ। ಮಂಗಳಂ ದೇವಿ। ಮಂಗಳಂ।।3।। ಭೈರವಿ ದೇವಿ। ವಿದ್ಯಾಪ್ರದಾಯಿನಿ। ಸರಸ್ವತಿದೇವಿಯೆ ಮಂಗಳಂ।

ವಾರಾಹಿರೂಪಿಣಿ। ವೇದಸ್ವರೂಪಿಣಿ। ಜಗತ್ಕಾರಿಣಿ ಮಂಗಳಂ। ಮಂಗಳಂ ದೇವಿ ಮಂಗಳಂ।।4।। ಭಗವತಿ ದೇವಿ। ಬಾಲ ಹನುಮನ ಭಾರತಿ ದೇವಿ ಮಂಗಳಂ। ಶಂಕರಿದೇವಿಯೆ ಮಂಗಳಂ। ಶಿವಶಂಕರಿ ದೇವಿಯೆ ಮಂಗಳಂ।। ಮಂಗಳಂ ದೇವಿ ಮಂಗಳಂ।।

